# ಕಣ್ಮಣಿ

ಕಥಾಸಂಕಲನ

ಅನುಪಮಾ ನಿರಂಜನ



ಪ್ರಕಾಶಕರು
ಡಿ. ವಿ. ಕೆ. ಮೂರ್ತಿ
ಕೃಷ್ಣಮೂರ್ತಿಪುರಂ :: ಮೈಸೂರು ೪

*KANMANI* (Kannada)—Collection of Short Stories by Anupama Niranjana. Fourth Edition : 1992. Published by D. V. K. Murthy, Krishnamurthipuram, Mysore-570 004.

ಮೊದಲನೆಯ ಮುದ್ರಣ : ೧೯೫೨
ಎರಡನೆಯ ಮುದ್ರಣ : ೧೯೭೨
ಮೂರನೆಯ ಮುದ್ರಣ : ೧೯೭೯
ನಾಲ್ಕನೆಯ ಮುದ್ರಣ : ೧೯೯೨





ಮುಖಚಿತ್ರ : ವೆಂಕಟೇಶ್

ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು

# ಮೊದಲ ಮಾತು

(ಎರಡನೆಯ ಮುದ್ರಣ)

ನನ್ನ ಚೊಚ್ಚಲು ಕೃತಿ 'ಕಣ್ಮಣಿ'ಯ ಎರಡನೆಯ ಆವೃತ್ತಿ ಈಗ ಪ್ರಕಟವಾಗು ತ್ತಿದೆ. ಇಪ್ಪತ್ತು ವರ್ಷಗಳಿಗೆ ಹಿಂದೆ ಬರೆದ ಈ ಸಂಗ್ರಹದಲ್ಲಿನ ಕಥೆಗಳು, ಇಂದಿಗೂ ನನಗೆ ಪ್ರಿಯವಾಗಿವೆ. ಅನುಭವ, ಮನೋಭಾವಗಳು ಮಾಗಿ ದಂತೆ, ಕೃತಿರಚನೆಯಲ್ಲೂ ವೈವಿಧ್ಯ, ಬದಲಾವಣೆ ಕಂಡುಬರುವುದು ಸ್ವಾಭಾ ವಿಕ. ಆದರೂ ಆರಂಭದ ಬರವಣಿಗೆಯನ್ನು ಮರೆಯುವುದು ಹೇಗೆ ತಾನೇ ಸಾಧ್ಯ ?

'ಕಣ್ಮಣಿ'ಯ ಪ್ರತಿಗಳು ಮುಗಿದು ಹಲವು ವರ್ಷಗಳೇ ಸಂದಿದ್ದರೂ ಅದನ್ನು ಮತ್ತೆ ಪ್ರಕಟಿಸುವ ಸಾಹಸಕ್ಕೆ ಕೈಹಾಕಿರಲಿಲ್ಲ. ಕನ್ನಡದ ಖ್ಯಾತ ಪ್ರಕಾಶಕರಾದ ಶ್ರೀ ಡಿ. ವಿ. ಕೆ. ಮೂರ್ತಿಯವರು ಈ ಹೊತ್ತಗೆಯನ್ನು ಈಗ ಮತ್ತೆ ಪ್ರಕಟಿಸುತ್ತಿದ್ದಾರೆ. ಅವರಿಗೆ ನನ್ನ ನೆನಕೆಗಳು.

**ಅನುಪಮಾ ನಿರಂಜನ**

ಜೂನ್ ೧, ೧೯೭೨
ಜಯನಗರ
ಬೆಂಗಳೂರು ೧೧

# ಮೊದಲ ಮಾತು

(ಮೊದಲನೆಯ ಮುದ್ರಣ)

ನನ್ನ ಮೊದಲ ಕಥಾಸಂಗ್ರಹವಾದ 'ಕಣ್ಮಣಿ'ಯನ್ನು ಓದುಗರ ಮುಂದಿಡುತ್ತಿದ್ದೇನೆ.

ಮನಸ್ಸು ವ್ಯಗ್ರವಾದಾಗ, ಹೊಯ್ದಾಡಿದಾಗ, ಕ್ರಮಕ್ರಮವಾಗಿ ಈ ಕಥೆಗಳು ರೂಪುಗೊಂಡವು. ಬರೆದುದು ತನ್ನಲ್ಲೇ ಉಳಿಯದೆ, ನಾಲ್ಕಾರು ಜನರು ಅದನ್ನು ಓದುವಂತಾಗಬೇಕೆನ್ನುವುದು ಬರಹಗಾರರ ಸಾಮಾನ್ಯ ಬಯಕೆ. ಈ ಸಂಗ್ರಹದ ಮೂಲಕ, ನಾನು ಬರೆದಿರುವ ಕೆಲವು ಕಥೆಗಳು ಕನ್ನಡ ಓದುಗರಿಗೆ ದೊರೆಯುವುದು ಸಾಧ್ಯವಾಗಿದೆ.

ಕಳೆದ ಎರಡು ಮೂರು ವರ್ಷಗಳಿಂದ ನಾನು ಕತೆ ಬರೆಯುತ್ತಿದ್ದೇನೆ. ಬರೆಯುವವರ ದೃಷ್ಟಿಯಲ್ಲಿ ಈ ಅವಧಿ ತೀರ ಅತ್ಯಲ್ಪವಿರಬಹುದು. ಕೈ ಪಳಗಲು, ಒಳ್ಳೊಳ್ಳೆಯ ಕೃತಿರಚನೆಯಾಗಲು, ಈ ಕಾಲಾವಧಿ ಸಾಕಾಗದೆ ಇರಬಹುದು. ಆದರೆ ಇಂದಿನ ಸಮಾಜಪದ್ಧತಿಯಲ್ಲಿ ಒಬ್ಬ ಮಹಿಳೆ, ಎರಡು ಮೂರು ವರ್ಷಗಳ ದೀರ್ಘಕಾಲ ಬರೆಯುವ ಚಟವನ್ನು ಉಳಿಸಿಕೊಂಡು ಬರುವುದೇ ದೊಡ್ಡ ಸಾಹಸದ ಕೆಲಸ. ಕನ್ನಡದಲ್ಲಿ ಸ್ತ್ರೀಯರು ಬರೆಯುವುದೇ ಅಪೂರ್ವವಾಗಿರುವುದರಿಂದ, ಇಂಥ ಸಂಕಲನ ಹೊರಬೀಳುತ್ತಿರುವುದು ಅಸಮಂಜಸವಾಗಲಾರದೆಂದು ನಂಬಿದ್ದೇನೆ.

ಇಂದು ನಮ್ಮ ಸುತ್ತಲೂ ಅನ್ಯಾಯದ ಆಳ್ವಿಕೆಯನ್ನು ಕಾಣುತ್ತಿದ್ದೇವೆ. ಈ ವಿಷಮ ಸಮಾಜವ್ಯವಸ್ಥೆಯಲ್ಲಿ ಹೆಂಗಸು ಗಂಡಸಿನ ಊಳಿಗದ ತೊತ್ತಾಗಿದ್ದಾಳೆ. ದಿನವೆಲ್ಲಾ ದುಡಿದರೂ ಹೊಟ್ಟೆ ತುಂಬದೆ ಪರಿತಪಿಸುವ ಬಡ ಜನಕೋಟಿಗೆ ನಮ್ಮಲ್ಲಿ ಬರಗಾಲವಿಲ್ಲ. ಶೋಷಿತರ ಆ ಜಾತಿಗೇ ಮೂಕಸ್ತ್ರೀಯೂ ಸೇರಿದ್ದಾಳೆ.

ಇವರೆಲ್ಲರ ಹೃದಯದ ಬೇಗುದಿಯನ್ನು ಚಿತ್ರಿಸಲು, ಅನ್ಯಾಯ–ದಬ್ಬಾಳಿಕೆಗಳ ವಿರುದ್ಧ ಸಿಡಿದೇಳಬೇಕೆನ್ನುವ ಅವರ ಮನೋಭಾವನೆಗೆ ರೂಪುಗೊಡಲು, ನನ್ನ ಕೆಲವು ಕತೆಗಳಲ್ಲಿ ನಾನು ಯತ್ನಿಸಿದ್ದೇನೆ. ಇಲ್ಲಿ

ಕಾಣುವ ಪ್ರವೃತ್ತಿಯ ಬಗ್ಗೆ ವಿಚಾರಶೀಲ ಓದುಗರ ಸಹಾನುಭೂತಿ ದೊರೆಯುವುದೆಂಬ ಭರವಸೆ ನನಗಿದೆ.

ಒಂದೆರಡು ಕಡೆ, ಸಣ್ಣ ಕತೆಗಳ ವ್ಯಾಪ್ತಿಗೆ ಹೊರಗಾಗಿರುವ ವಿಷಯಗಳನ್ನೂ ಆರಿಸಿಕೊಂಡಿದ್ದೇನೆ. ಕಾದಂಬರಿಗಳನ್ನೋದುವ ಅವಕಾಶ–ತಾಳ್ಮೆ ಇಲ್ಲದವರಿಗೆ ಈ ಸಣ್ಣ ಕತೆಗಳಿಂದ ಸ್ವಲ್ಪಮಟ್ಟಿನ ಸಮಾಧಾನವಾದರೂ ಆಗಬಹುದು.

ಇನ್ನು ಪ್ರತ್ಯ ಪ್ರತ್ಯೇಕ ಕತೆಗಳ ಬಗ್ಗೆ—

'ಕಣ್ಮಣಿ' ನನ್ನ ಒಬ್ಬ ಬಂಧುವಿಗೆ ಸಂಬಂಧಿಸಿದ್ದು. ಅದು, ನಮ್ಮಿಂದ ಮರೆಯಾದ ಅಣ್ಣ ಜಯರಾಮುವಿನ ನೆನಪಿಗಾಗಿ ಬರೆದ ಸತ್ಯ-ಕಥೆ. ತುಂಬಾ ಹಿಂದೆ ಬರೆದ ಈ ಕಥೆಯನ್ನು ಇತ್ತೀಚೆಗೆ ಓದಿದಾಗ, ಅದರ ಕಥಾನಿರೂಪಣೆ—ತಂತ್ರಗಳ ಬಗ್ಗೆ ಅತೃಪ್ತಿ ಎನಿಸಿತು. ಆದರೂ ಅದು ನನಗೆ ಪ್ರಿಯವಾದ ಕತೆ ಎಂಬ ಕಾರಣದಿಂದ ಇಲ್ಲಿ ಅಗ್ರಸ್ಥಾನ ದೊರೆತಿದೆ.

'ಮೂಲಾ ನಕ್ಷತ್ರದ ಹುಡುಗಿ' ಇಂದಿನ ವಿಚಾರಹೀನ ಸಮಾಜದಲ್ಲಿ ಹೆಣ್ಣು ಪಡುತ್ತಿರುವ ಅಸಹನೀಯ ಯಾತನೆಯ ಚಿತ್ರಣ.

ಗಂಡುಹೆಣ್ಣಿನ ಅಮರವಾದ ಅನ್ಯೋನ್ಯ ಅನುರಾಗದ ವಸ್ತುವನ್ನೆತ್ತಿಕೊಂಡು ಹೊಸ ತಂತ್ರವನ್ನು ಬಳಸಿ, 'ಷಹಜಹಾನ್ ಚಂದಣ್ಣ'ನನ್ನು ಬರೆಯಲಾಗಿದೆ.

ಆಶ್ರಯವಿಲ್ಲದೆ, ನಿರ್ಗತಿಕರಾಗಿ, ಕಾರವಾನ್ ಹೊರಟಿರುವ ಜನ-ವಿಭಾಗದ ಚಿತ್ರ 'ಮಣ್ಣುದಿಬ್ಬದ ಮೇಲೆ.'

'ಆ ಮೂರು ಮನೆಗಳು' ಎಂಬ ಕತೆ, ಮೂರು ಬಗೆಯ ಸ್ತ್ರೀಯರ ಗೋಳನ್ನು ಚಿತ್ರಿಸುತ್ತದೆ.

'ಒಂದೇ ಜಾತಿ'—ಉಪಾಧ್ಯಾಯರ ಸಮ್ಮೇಳನವೊಂದರಿಂದ ಪ್ರೇರಿತವಾಗಿ ಹುಟ್ಟಿತು.

'ಪ್ರತಿಫಲ'ದಲ್ಲಿ ನಮಗೆ ದೊರೆತಿರುವ ಸ್ವಾತಂತ್ರ್ಯದಲ್ಲಿ ಕಂಡುಬಂದ ಒಂದು ವಿಪರ್ಯಾಸದ ಚಿತ್ರಣವಿದೆ.

ಸ್ವಾರಸ್ಯಪೂರ್ಣವೆಂದು ಕಾಣುವ 'ಸಾವಿನ ಮುಖ'ದಲ್ಲಿ ಬದುಕಿನ ಆಶಾವಾದವಿದೆ.

ಜೀವನದಲ್ಲಿ ನಾನು ಕಂಡ ವಿವಿಧ ಚಿತ್ರಗಳೇ, ನಾನು ಸಾಕ್ಷಿಯಾದ ವಿವಿಧ

ಘಟನೆಗಳೇ, ಇಲ್ಲಿರುವ ನನ್ನ ಕಥೆಗಳಿಗೆ ವಸ್ತುಗಳಾಗಿವೆ. ಇಂದು ಬಳಲು ತ್ತಿರುವವರೆಲ್ಲ ಕ್ರೂರ ವಾಸ್ತವತೆಯನ್ನು ಇದಿರಿಸಬೇಕೆಂಬುದು ನನ್ನ ಬಯಕೆ ; ಇವತ್ತು ಇಲ್ಲದ ಸುಖವನ್ನು ನಾಳೆ ಅವರು ಗಳಿಸಬೇಕೆಂಬುದು ನನ್ನ ಆಸೆ.

ಅಸಹನೆಯ ಬಿರುಗಣ್ಣುಗಳೂ ಕಿಡಿನುಡಿಗಳೂ ವಿಪುಲವಾಗಿರುವ ಈಗಿನ ವಾತಾವರಣದಲ್ಲಿ, ಬರೆಹಗಾರ್ತಿಯರ ಸಾಹಿತ್ಯ ಚಟುವಟಿಕೆ ಕಲ್ಲು ಮುಳ್ಳಿನ ಹಾದಿಯಿಂದ ಕೂಡಿದೆ. ಆ ಹಾದಿಯನ್ನೇ ತುಳಿದುಕೊಂಡು ನಾನು ಬರೆಯ ತೊಡಗಿದ್ದೇನೆ...

ಈ ಸಂಗ್ರಹಕ್ಕೆ ಮುನ್ನುಡಿ ಬರೆದ ಸೋದರ 'ಚದುರಂಗ'ರಿಗೆ ನಾನು ಕೃತಜ್ಞಳು.

ಸಂಗ್ರಹವನ್ನು ಒಪ್ಪವಾಗಿ ಅಚ್ಚುಹಾಕಿಸಿ ಪ್ರಕಟಿಸಲು ಮುಂದೆ ಬಂದ ಪುರೋಗಾಮಿ ಪ್ರಕಾಶನದ ಸಂಪಾದಕ ಶ್ರೀ ನಿರಂಜನರಿಗೆ ನನ್ನ ಧನ್ಯವಾದ ಗಳು.

ಅನುಪಮಾ

ಜೂನ್, ೧೯೫೨
ಮೈಸೂರು

# ಮುನ್ನುಡಿ

(ಮೊದಲನೆಯ ಮುದ್ರಣ)

---

"We have all issued out of Gogol's 'Overcoat'" ("ರಷ್ಯದ ಸಾಹಿತಿಗಳಾದ ನಾವೆಲ್ಲರೂ ಗೊಗೋಲ್‌ನ **'ಓವರ್‌ಕೋಟ್'** ಎಂಬ ಸಣ್ಣ ಕತೆಯಿಂದಲೇ ಹೊರಬಂದವರು")—ಎಂದು ಪ್ರಾಚೀನ ರಷ್ಯನ್ ಸಾಹಿತಿ ಗೊಗೋಲ್‌ನ ವಿಷಯ ಪ್ರಸ್ತಾಪಿಸುತ್ತಾ ಆಗಿಹೋದ ಪ್ರಸಿದ್ಧ ರಷ್ಯನ್ ಕತೆಗಾರ ದಾಸ್ತೋವ್‌ಸ್ಕಿ ಒಮ್ಮೆ ಹೇಳಿದ್ದುಂಟು. ಕನ್ನಡ ಸಣ್ಣ ಕತೆಗಳ ಬಗ್ಗೆ ವಿಚಾರ ಮಾಡುವಾಗ ಅದೇ ರೀತಿ ನಾವೂ ಹೇಳಿಕೊಳ್ಳ ಬೇಕಾಗುತ್ತದೆ. "ಕನ್ನಡದ ಸಣ್ಣ ಕತೆಗಾರರೆಲ್ಲರೂ ಪೂರ್ಣವಾಗಿ 'ಶ್ರೀನಿವಾಸ'ರ ಸಣ್ಣ ಕತೆಗಳಿಂದಲೇ ಸ್ಫೂರ್ತಿ ಪಡೆದು ಅವತರಿಸಿದವರು!"

ಅಂದರೆ ಮಾಸ್ತಿ ವೆಂಕಟೇಶ ಅಯ್ಯಂಗಾರರ ಹಿಂದೆ ನಮ್ಮ ಸಾಹಿತ್ಯದಲ್ಲಿ ಚಿಕ್ಕ ಕತೆಗಳೇ ಇಲ್ಲವೆಂದೇನಲ್ಲ. ಬೃಹತ್ಕಥಾಮಂಜರಿ, ಕಥಾಸರಿತ್ಸಾಗರ, ದಶಕುಮಾರ ಚರಿತ್ರೆ, ಪಂಚತಂತ್ರ, ವಡ್ಡಾರಾಧನೆ, ಇವೇ ಮೊದಲಾದ ಹಳೆಯ ಗ್ರಂಥಗಳು ದಿಟವಾಗಿಯೂ ಮುತ್ತಿನಂತಹ ಪುಟ್ಟ ಕತೆಗಳ ಗಣಿಗಳು. ಆದರೆ ಯಾವ ಸಾಹಿತ್ಯಪ್ರಕಾರವನ್ನು ನಾವಿಂದು 'ಸಣ್ಣ ಕತೆ' ಎಂದು ಪರಿಗಣಿಸುತ್ತೇವೆಯೊ ಅದನ್ನು ವಿಶಿಷ್ಟ ರೀತಿಯಲ್ಲಿ ಕನ್ನಡದಲ್ಲಿ ಸ್ಥಾಪಿಸಿದ ಶ್ರೇಯಸ್ಸು ನಿಸ್ಸಂದೇಹವಾಗಿ ಮಾಸ್ತಿಯವರದೇ.

ಸಣ್ಣ ಕತೆ ಮೊದಲು ಪ್ರಚಾರಕ್ಕೆ ಬಂದುದು ಹತ್ತೊಂಬತ್ತನೆಯ ಶತಮಾನದಲ್ಲಿ. ಅಮೇರಿಕದ ಎಡ್ಗರ್ ಆ್ಯಲನ್ ಪೊ ಈ ನೂತನ ವಿಧಾನವನ್ನು ಸಾಹಿತ್ಯರಂಗದಲ್ಲಿ ಯಶಸ್ವಿಯಾಗಿ ನಿರ್ಮಿಸಿದಾತ. ಆವನ ಅನಂತರ ಹಾಥಾರ್ನ್, ಬ್ರೆಟ್ ಹಾರ್ಟ್, ಓ ಹೆನ್ರಿ, ಮೊದಲಾದವರು ಹೊಸ ಹೊಸ ಪ್ರಯೋಗಗಳನ್ನು ನಡೆಸಿ ಈ ವಿಧಾನವನ್ನು ವಿಧವಿಧವಾಗಿ ಬೆಳೆಸತೊಡಗಿ ದರು. ಹೆಚ್ಚು ಕಡಿಮೆ ಅದೇ ಕಾಲಕ್ಕೆ ಫ್ರಾನ್ಸ್‌ನಲ್ಲಿಯೂ ಸಣ್ಣ ಕತೆ ಹುಟ್ಟಿ ಕೊಂಡಿತು. ಮೊಪಸಾ, ಮೆರಿಮೀ, ಗಾಟಿಯರ್, ಬಾರ್‌ಬೂಸೆ, ಇವರು ಅದನ್ನು ಬೆಳೆಸಿದವರಲ್ಲಿ ಪ್ರಮುಖರು. ಹಾಗೆಯೇ ಕ್ರಮೇಣ ಈ ಸಾಹಿತ್ಯ

ಪ್ರಕಾರ ವಿಶ್ವದಾದ್ಯಂತ ಹಬ್ಬಿತು. ಇಂಗ್ಲೀಷಿನಲ್ಲಿ ಸ್ಟೀವನ್‌ಸನ್, ಡಿಕನ್ಸ್, ವೆಲ್ಸ್—ಇಂಥ ಪ್ರತಿಭಾನ್ವಿತರು ವಿಶೇಷ ಆಸಕ್ತಿಯಿಂದ ದುಡಿದು ಕಥಾ ಫಲಕದ ವ್ಯಾಪ್ತಿಯನ್ನು ವಿಸ್ತರಿಸಿದರು. ರಷ್ಯನ್ ಭಾಷೆಯಲ್ಲೂ ಸಹ ಗೊಗೋಲ್, ದಾಸ್ತೋವ್‌ಸ್ಕಿ, ಟಾಲ್‌ಸ್ಟಾಯ್, ಚೆಕಾಫ್ ಮತ್ತು ಗೋರ್ಕಿ ಸಣ್ಣ ಕತೆಯ ವಸ್ತುವಿನ ಆಯ್ಕೆಯಲ್ಲಿಯೂ ಕಥಾಸಂವಿಧಾನದಲ್ಲಿಯೂ ಹೊಸ ಹೊಸ ಜಯಗಳಿಸಿ ರಷ್ಯನ್ ಕಥಾವೃಕ್ಷದಲ್ಲಿ ಅನೇಕಾನೇಕ ಸುಂದರ ಕಲಾಕುಸುಮಗಳನ್ನು ಅರಳಿಸಿದರು.

ಪಾಶ್ಚಾತ್ಯರಲ್ಲಿ ಹೀಗೆ ಬೆಳೆದು ನಿಂತ ಹೊಸ ಲಾವಣ್ಯದ ಈ ಸಾಹಿತ್ಯ-ಕುವರಿಗೆ ಎಲ್ಲರಂತೆ ಭಾರತೀಯರೂ ಮಾರುಹೋದರು. ಅವರೂ ಅವಳನ್ನು ಆದರದಿಂದ ತಮ್ಮಲ್ಲಿಗೆ ಬರಮಾಡಿಕೊಂಡು ತಮ್ಮ ಸಕಲ ಚೇತನವನ್ನೂ ವಿನಿಯೋಗಿಸಿ ಆಕೆಯನ್ನು ಸುಂದರವಾಗಿ ಬೆಳೆಸಿ ದೊಡ್ಡದು ಮಾಡುವುದರಲ್ಲಿ ನಿರತರಾದರು.

ಬಂಗಾಳದಲ್ಲಿ ಉದ್ಭವಿಸಿ ಪ್ರವಹಿಸಲಾರಂಭಿಸಿದ ಸಣ್ಣ ಕತೆಯ ಝರಿ ಭಾರತದ ಪ್ರತಿಯೊಂದು ಭಾಷೆಯ ಮೇಲೂ ತನ್ನ ಪ್ರಭಾವ ಬೀರಿತು. ಕನ್ನಡದಲ್ಲಂತೂ ಕೆಲ ಕಾಲ ನಿಶ್ಚೇಷ್ಟಿತವಾಗಿದ್ದ ಸಾಹಿತ್ಯದ ನವೋದಯ ವಿಶೇಷವಾಗಿ ಸಣ್ಣ ಕತೆಯಿಂದಲೇ ಆರಂಭವಾಯಿತೆನ್ನಬೇಕು. ರಂಗಪ್ಪನ ದೀಪಾವಳಿ, ರಂಗಪ್ಪನ ಮದುವೆ—ಇಂತಹ ಸರಳ ಸುಂದರ ಕೃತಿಗಳಿಂದ ಶ್ರೀನಿವಾಸರು ಕನ್ನಡದಲ್ಲಿ ಸಣ್ಣ ಕತೆಯನ್ನು ಪ್ರತಿಷ್ಠಾಪನೆ ಮಾಡಿದರು. ಆ ಕಾಲಕ್ಕೆ ಸಣ್ಣಕತೆಯ ಸ್ನಿಗ್ಧ ಸೌಂದರ್ಯವನ್ನು ಗುರುತಿಸಲಾರದ ಜನ "ಇದೇನು ಸಣ್ಣ ಕತ್ತೆ ಬಂತಪ್ಪಾ ನಮ್ಮ ಸಾಹಿತ್ಯಕ್ಕೆ!" ಎಂದು ಮಾಸ್ತಿಯವರನ್ನು ಗೇಲಿಮಾಡಿದ್ದೂ ಉಂಟು. ಆದರೂ ಅವರು ಧೃತಿಗೆಡಲಿಲ್ಲ. ಅಪಾರ ಸಹನೆಯಿಂದ, ಶ್ರದ್ಧೆಯಿಂದ, ಕೃಷಿಮಾಡಿ ಕನ್ನಡ ಸಾಹಿತ್ಯೋದ್ಯಾನದಲ್ಲಿ ಸಣ್ಣ ಕತೆ ತನ್ನದೇ ಆದ ಸೌಂದರ್ಯದಿಂದ ಮೆರೆಯುವಂತೆ ಮಾಡಿದರು.

ಮಾಸ್ತಿಯವರು ಹೊತ್ತಿಸಿದ ಜ್ಯೋತಿಯಿಂದ ಪುಲಕಿತರಾದ ಅನೇಕ ಕನ್ನಡ ಲೇಖಕರು ಅದರ ಕುಡಿಯ ಜ್ವಾಲೆಯಿಂದ ತಮ್ಮ ಹಣತೆಗಳನ್ನೂ ಹಚ್ಚಿಕೊಂಡು ಕೃತಾರ್ಥರಾದರು. ಕನ್ನಡಮ್ಮನ ಗುಡಿ ಈ ಎಲ್ಲ ಹಣತೆಗಳ

ಬೆಳಕಿನಲ್ಲಿ ದೇದೀಪ್ಯಮಾನವಾಗಿ ಬೆಳಗಿದೆ. ಕನ್ನಡ ಸಣ್ಣ ಕತೆಗಳು ಕನ್ನಡ ಜನವನ್ನಷ್ಟೇ ಮರುಳುಗೊಳಿಸಿದುದಲ್ಲದೆ ತಮಿಳು, ತೆಲುಗು, ಬಂಗಾಳಿ, ಹಿಂದಿ ಮತ್ತು ಇಂಗ್ಲಿಷಿಗೂ ಭಾಷಾಂತರವಾಗಿ ಎಲ್ಲರ ಮನ್ನಣೆಗೂ ಪಾತ್ರವಾಗಿವೆ. ಕನ್ನಡದ ಸಣ್ಣ ಕತೆಗಳು ಕೆಲವಾದರೂ ಇಂದು ವಿಶ್ವಸಾಹಿತ್ಯದಲ್ಲಿ ಸ್ಥಾನ ಪಡೆದಿವೆ, ಎಂದು ಹೇಳಿದರೆ ಅದು ಕೇವಲ ಸ್ವಾಭಿಮಾನದ ಮಾತೇನಲ್ಲ. ಒಂದು ಅರ್ಥದಲ್ಲಿ ಕನ್ನಡ ಜನಪದದ ಸತ್ಯದರ್ಶನವಾಗಬೇಕಾದರೆ, ಅವರ ಆಸೆ ನಿರಾಸೆ, ನಗು ನೋವು, ಸುಖ ದುಃಖಗಳ ಕಲ್ಪನೆ ದೊರಕಬೇಕಾದರೆ, ಕನ್ನಡದ ಸಣ್ಣ ಕತೆಗಳನ್ನು ಒಂದು ಬಾರಿ ಓದಿ ನೋಡಬೇಕು. ನಮ್ಮ ಸಮಾಜದ ಅನೇಕ ಸಮಸ್ಯೆಗಳನ್ನು ಕುರಿತು ಕನ್ನಡ ಕತೆಗಾರರು ಕಥಾಸೃಷ್ಟಿ ಮಾಡಿದ್ದಾರೆ. ಬಾಲ್ಯವಿವಾಹ, ವಿಧವೆಯರ ಗೋಳು, ವೇಶ್ಯೆಯರ ಒಳಜೀವನದ ಭಯಂಕರ ವೇದನೆ, ವಿರಸದಾಂಪತ್ಯ ಮತ್ತು ಅದರ ಫಲ—ಇಂಥ ಅನೇಕ ಸಾಮಾಜಿಕ ಪ್ರಶ್ನೆಗಳಿಗೆ ಕಥಾರೂಪ ಕೊಟ್ಟು ಅವುಗಳ ಪರಿಹಾರಕ್ಕೆ ಮಾರ್ಗದರ್ಶಕರಾಗಿದ್ದಾರೆ.

ಕಥಾತಂತ್ರದಲ್ಲಿಯೂ ನಮ್ಮವರು ಯಾರಿಗೂ ಹಿಂದುಳಿದಿಲ್ಲ. ಹೊಸ ಹಾದಿಗಳಲ್ಲಿ ನಡೆದು ಹೊಸ ಶಿಖರಗಳನ್ನು ವಶಪಡಿಸಿಕೊಂಡಿದ್ದಾರೆ. ಆವರಣಪ್ರಧಾನವಾದ ಶ್ರೀನಿವಾಸರ "ಇಂದಿರೆಯೊ, ಅಲ್ಲವೊ" ಆ ಜಾತಿಯ ಅತ್ಯುತ್ತಮ ಕತೆ. ಹಾಗೆಯೇ ದೇವುಡುರವರ "ವೈಣಿಕ" ಎಂಬ ಕತೆಯಲ್ಲೂ ಆವರಣವೇ ಮುಖ್ಯವಾಗಿದ್ದು ಸುಂದರವಾಗಿ ರಚಿತವಾಗಿದೆ. ಆನಂದರ "ಮಾಟಗಾತಿ", ಶ್ರೀನಿವಾಸರ "ಹೇಮಕೂಟದ ಆಶ್ರಮದಿಂದ ಬಂದಮೇಲೆ" ಮತ್ತು "ಗಯಟೆ ಕವಿಯ ಕೊನೆಯ ದಿನಗಳು"—ಇವು ಕನ್ನಡ ಕತೆಗಾರರ ಕಲ್ಪನಾಚಾತುರ್ಯಕ್ಕೆ ಸಾಕ್ಷಿಗುಂಭಗಳಂತಿವೆ. ವೇಶ್ಯಾವೃತ್ತಿಯಮೇಲೆ ಶ್ರೀನಿವಾಸರ "ಬೀದಿಯಲ್ಲಿ ಹೋಗುವ ನಾರಿ" ಅ. ನ. ಕೃಷ್ಣರಾಯರ "ಪತಿತೆ" ಮತ್ತು ಆನಂದರ "ಬದುಕು" ಒಂದು ಜಾತಿಯವಾದರೆ. ಅ. ನ. ಕೃಷ್ಣರಾಯರೇ ಬರೆದ "ಹಳದಿಯ ಬಾಗಿಲು" ಕಥೆ ಸೂಳೆಯ ಬಾಳುವೆಯ ಎಲ್ಲ ಕಠೋರತೆಯ ಸಾರವನ್ನೂ ಕೆಲವೇ ಮಾತುಗಳಲ್ಲಿ ಅತ್ಯಂತ ಮನೋಜ್ಞವಾಗಿ ಚಿತ್ರಿಸುತ್ತದೆ. ಆನಂದರ "ನಾನು ಕೊಂದ ಹುಡುಗಿ" ಕೆಲಕಾಲದ ಹಿಂದೆ ನಮ್ಮ ಜನಜೀವನದಲ್ಲಿ ಆಚರಣೆಯಲ್ಲಿದ್ದ ಬಸವಿಬಿಡುವ ಪದ್ಧತಿಯಮೇಲೆ ಬರೆಯಲ್ಪಟ್ಟ ಸುಂದರ

ಕತೆ. ಹಾಸ್ಯರಸಕ್ಕೆ ರಮಾನಂದರ "ನನ್ನ ಭಾವ", ಆನಂದರ "ಹೆಂಡತಿಯ ಕಾಗದ", ಶ್ರೀನಿವಾಸರ "ರಂಗಪ್ಪನ ಕೋರ್ಟ್ ತೀರ್ಪು" ಮತ್ತು ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ ಹಲವಾರು ಕತೆಗಳು ಉತ್ತಮ ನಿದರ್ಶನಗಳಾಗಿವೆ. ಶೃಂಗಾರದಲ್ಲಂತೂ ಆನಂದರ "ಚಂದ್ರಗ್ರಹಣ" ಮುಂತಾದ ಕತೆಗಳು ಅನ್ಯಾದೃಶವಾಗಿ ವಿರಚಿತವಾಗಿವೆ. ದಂಪತಿಗಳಲ್ಲಿರುವ ವಿವಿಧ ರೀತಿಯ,ವಿವಿಧ ಜಾತಿಯ ಪ್ರಣಯ ಸನ್ನಿವೇಶ ಮತ್ತು ಸಂಭಾಷಣೆ, ಹೊಸದಾಗಿ ಮದುವೆಯಾದ ಅನನುಭವಿ ಹೆಣ್ಣು ಗಂಡುಗಳಿಗೆ, ಉತ್ತಮ ರೀತಿಯಲ್ಲಿ ಅವರು ಪರಸ್ಪರ ಪ್ರೇಮ ಮಾಡುವುದು ಹೇಗೆ, ಎಂದು ತೋರಿಸಿಕೊಡುವಂತಿವೆ.

ಅವರೇ ಬರೆದ "ಸರಸಿಯ ಗೊಂಬೆ" ಆನಂದರ ಕಥನ ಕಲೆಯ ಪರಿಪಕ್ವ ಫಲ; ಕನ್ನಡದ ಹೆಮ್ಮೆಯ ಕೃತಿಗಳಲ್ಲೊಂದು. ಐತಿಹಾಸಿಕ ಕತೆಗಳಿಗೂ ನಮ್ಮಲ್ಲಿ ಕೊರತೆಯಿಲ್ಲ. ಉದಾ : "ನಿಜಗಲ್ಲಿನ ರಾಣಿ" "ಅಲಂಗಿರಿ" "ಜಾತಿಹೀನನ ಮನೆಯ ಜ್ಯೋತಿ", ಟೆಲಿಫೋನಿನಲ್ಲಿ ಒಬ್ಬನೇ ಮಾತಾಡಿದಂತೆ ರಚನೆಯಾಗಿರುವ ಶ್ರೀನಾಥರ "ಮುಟ್ಟಿದ್ದೆಲ್ಲ ಚಿನ್ನ". ಆ ಬಗೆಯಲ್ಲಿ ಏಕಮೇವಾದ್ವಿತೀಯಪಾತ್ರಪ್ರಧಾನವಾದ ಭಾರತೀಪ್ರಿಯರ "ಮೋಚಿ",ಜೂಜಿನಕುದುರೆಗಳ ಪ್ರೇಮ ನಿರೂಪಣೆಯನ್ನು ಚಮತ್ಕಾರವಾಗಿ ಮಾಡಿರುವ ಅವರ "ರಾಜರಾಣಿ" ಕತೆಗಳು ಅಪ್ಪಟ ಬಂಗಾರ. ಹೀಗೆಯೇ ಕನ್ನಡ ಜನಜೀವನದ ರನ್ನಭಂಡಾರದ ಬಾಗಿಲು ತೆರೆದು ಅಲ್ಲಡಗಿದ ಹೃದಯ ರತ್ನಗಳನ್ನು ಒಂದೊಂದಾಗಿ ತೆಗೆದು ತೋರಿಸಿರುವವರಲ್ಲಿ ಕುವೆಂಪುರವರು, ಕಾರಂತರು, ಗೋಪಾಲಕೃಷ್ಣರಾಯರು, ವೆಂಕಟರಾಮಯ್ಯನವರು, ಆನಂದಕಂದರು, ಕ್ಷೀರಸಾಗರರು, ರಾಜರತ್ನಂರವರು ಅಗ್ರಗಣ್ಯರು. ಗಂಡಸರ ಜೊತೆಜೊತೆಗೇ ಗೌರಮ್ಮ, ಶ್ಯಾಮಲೆ, ವಾಣಿ, ಗಿರಿಬಾಲೆ, ಲೀಲಾಕಾರಂತ, ಸಾವಿತ್ರಮ್ಮ, ಜಯಲಕ್ಷ್ಮಿ ಶ್ರೀನಿವಾಸನ್, ಪದ್ಮಾವತಿ ರಸ್ತೋಗಿ, ಇಂದಿರಾಬಾಯಿ, ಕಮಲಮ್ಮ, ತ್ರಿವೇಣಿ ಕಥಾರಚನೆಗೆ ಕೈಯಿಟ್ಟು 'ಸೈ' ಎನಿಸಿಕೊಂಡಿದಾರೆ. ೧೯೪೦ರ ಈಚೆಗಂತೂ ಕೆಲವು ಉತ್ಸಾಹಿ ತರುಣ ಲೇಖಕರು, ಸಣ್ಣ ಕತೆ ಸ್ಪಷ್ಟವಾಗಿ ದೀನದಲಿತರ ವಾಣಿಯಾಗುವಂತೆ ವಿಶೇಷವಾಗಿ ಶ್ರಮಿಸಿದ್ದಾರೆ. ಬಹುಮಟ್ಟಿಗೆ ಅವರಿಗೆ ಜಯವೂ ಲಭಿಸಿದೆ. ಆದರೆ ಇತ್ತೀಚಿಗಿನ ಕಥಾಕೃತಿಗಳನ್ನು ಮೊತ್ತದಲ್ಲಿ ಹಿಂದಿನ ಬೆಳೆಯೊಂದಿಗೆ ತುಲನೆಮಾಡಿ ನೋಡಿದರೆ ನಿರಾಸೆಯಿಂದ 'ಅಯ್ಯೋ'

ಎನ್ನುವಂತಾಗುತ್ತದೆ. ಸಣ್ಣಕಥಾಸೃಷ್ಟಿಯಲ್ಲಿ ಕಸವೇ ಅಧಿಕವಾಗುತ್ತಿರುವದರ ಜೊತೆಗೆ, ಜನತೆ ಕಾದಂಬರಿಯತ್ತ ಕಟಾಕ್ಷ ಬೀರುತ್ತಿರುವುದು, ಅದೇ ಕಾರಣ ದಿಂದ ಕಥಾಸಂಕಲನಗಳ ಮಾರಾಟ ಕಮ್ಮಿಯಾಗುತ್ತಿರುವುದು—ಎಲ್ಲ ನೋಡಿ ದರೆ ಸಣ್ಣ ಕತೆಗೆ ಇದು ಗ್ರಹಣಕಾಲ, ಇನ್ನೆಷ್ಟು ದಿನ ಈ ಶೋಚನೀಯ ಪರಿಸ್ಥಿತಿ ? ಎಂದುಕೊಳ್ಳುತ್ತಿದ್ದೆ. ಇಂಥ ಸಮಯದಲ್ಲಿ ತಂಗಿ ಅನುಪಮಾ ದೇವಿಯವರ 'ಕಣ್ಮಣಿ' ಕಥಾಸಂಗ್ರಹ ಓದಿ ಮನಸ್ಸಿಗೆ ತುಂಬಾ ಹರ್ಷ ವಾಯಿತು.

ಮೆಡಿಕಲ್ ಕಾಲೇಜಿನ ವಿದ್ಯಾರ್ಥಿನಿಯಾದ ಇವರು, ಗೌರಮ್ಮ, ಶ್ಯಾಮಲೆ, ವಾಣಿ ಇವರ ಪರಂಪರೆಯನ್ನು ಕಾಯ್ದುಕೊಂಡಿರುವುದಲ್ಲದೆ ಬಾಳನ್ನು ನೋಡುವ ನೋಟದಲ್ಲಿ ಅವರೆಲ್ಲರಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ ದಾರೆ ಎನ್ನುವುದು ಈ ಕಥಾಸಂಕಲನದಿಂದ ಸ್ಪಷ್ಟವಾಗಿದೆ. ಹಿಂದಿನ ಲೇಖಕಿ ಯರು ಈ ಪುರುಷ ಸಮಾಜದಲ್ಲಿ ಹೆಣ್ಣಿಗೆ ನಡೆಯುವ ಅಪಚಾರ, ಅನ್ಯಾಯ ಗಳನ್ನು ಚಿತ್ರಿಸಿದರೂ ಹೆಣ್ಣಿನ ದುರಂತದ ನೈಜಕಾರಣವನ್ನು ಅರಿಯಲಾರದೆ ಹೋದರು. ಹೆಣ್ಣಿನ ಬಾಳು ಕಣ್ಣೀರು ಎಂಬ ಅರಿವೇನೋ ಅವರಿಗಿದೆ. ಆದರೆ ಆ ಕಣ್ಣೀರಿಗೆ ಕಾರಣ ನಿಜವಾಗಿಯೂ ಎಲ್ಲಿದೆ, ಅದಕ್ಕೆ ಪರಿಹಾರವೇನು ? ಎಂದರೆ, ಇವರ ಕತೆಗಳಲ್ಲಿ ಉತ್ತರವಿಲ್ಲ. ಅನುಪಮಾದೇವಿ ಈ ಸಮಸ್ಯೆ ಯನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ನಮ್ಮ ಸಮಾಜದ ಆರ್ಥಿಕ ವಿಷಮತೆಯ ಗರ್ಭದಲ್ಲಿ ಹುದುಗಿಹೋದ ಇದರ ಎಳೆಗಳನ್ನು ಸೂಕ್ಷ್ಮವಾಗಿ ಶೋಧಿಸಿ ನೋಡಿದಾರೆ. ಇದು ಪಾಳೆಯಗಾರ ಪದ್ಧತಿಯ ಶೃಂಖಲೆಗಳಲ್ಲಿ ಸಿಕ್ಕು ತೊಳಲುತ್ತಿರುವ ಸಮಾಜ; ಈ ಪದ್ಧತಿಯನ್ನು ನಾಶಪಡಿಸಿದ ಹೊರತು ಹೆಣ್ಣಿಗೆ ಮುಕ್ತಿಯಿಲ್ಲ; ಅವಳ ಬಾಳು ಸಹಜವಾಗಿ ಅರಳಿ ತನ್ನ ಪರಿಮಳವನ್ನು ನಾಲ್ಕು ಕಡೆಗೆ ಸವುರಾಗಿ ಬೀರುವುದಿಲ್ಲ—ಎಂದು ಮನಗಂಡಿದಾರೆ.

ಅನುಪಮಾದೇವಿಯವರ ಈ ಸಂಬುಗೆ 'ಕಣ್ಮಣಿ'ಯಲ್ಲಿ ಎಂಟು ಕತೆಗಳಾಗಿ ಮೂಡಿದೆ. ಮತ್ತು 'ಮಣ್ಣುದಿಬ್ಬದ ಮೇಲೆ', 'ಮೂಲಾ ನಕ್ಷತ್ರದ ಹುಡುಗಿ', 'ಆ ಮೂರು ಮನೆಗಳು', ಈ ಕಥೆಗಳಲ್ಲಿ ಸಾರ್ಥಕ್ಯವನ್ನೂ ಪಡೆದಿದೆ.

'ಮಣ್ಣುದಿಬ್ಬದ ಮೇಲೆ' ಕತೆಯಲ್ಲಿ ಬಡ ಸಂಸಾರಗಳು ಸಿರಿವಂತರ ಸ್ವಾರ್ಥದ ಚದುರಂಗದಾಟದ ಪ್ಯಾದೆಗಳಾಗಿ ಹೇಗೆ ನರಳುತ್ತಾರೆ ಎಂಬುದರ

ಹೃದಯಂವಿದ್ರಾವಕ ಚಿತ್ರಣವಿದೆ. ಯಾರ ತಂಟೆಗೂ ಹೋಗದೆ ಪಟ್ಟಣ ದಿಂದ ದೂರವಾಗಿ ಗುಡ್ಡದ ಮೇಲೆ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿ ಸುತ್ತಾ ತಮ್ಮ ಬಡತನದಲ್ಲೂ ಒಂದು ಸುಖವನ್ನು ಕಲ್ಪಿಸಿಕೊಂಡು ಜೀವಿಸುವ ಶ್ರಮಜೀವಿಗಳ ಸರಳ ಸುಂದರ ಬಾಳುವೆಯನ್ನು ಧೂರ್ತನಾದ ಶ್ರೀಮಂತ ಕ್ರೂರವಾಗಿ ಬುಡಮೇಲುಮಾಡಿ, ಅವರ ಗುಡಿಸಲುಗಳನ್ನು ನೆಲಸಮ ಮಾಡಿ, ಅವುಗಳ ಮೇಲೆ ತನ್ನ ಸೌಧವನ್ನು ನಿರ್ಮಿಸಲೆತ್ನಿಸುವುದನ್ನು ಕಂಡಾಗ ಓದುಗರಾದ ನಮಗೆ 'ಇದು ಪರಮ ಅನ್ಯಾಯ. ಇದನ್ನು ತೊಡೆದುಹಾಕ ಬೇಕು' ಎಂದೆನಿಸುತ್ತದೆ. ಇದನ್ನು ಅನುಪಮಾದೇವಿ ಧ್ವನಿಪೂರ್ವಕವಾಗಿ, ಕಲಾತ್ಮಕವಾಗಿ ನಿರೂಪಿಸಿದ್ದಾರೆ. ನನ್ನ ದೃಷ್ಟಿಯಲ್ಲಿ ಈ ಕತೆ ಈ ಸಂಕಲನ ದಲ್ಲೇ ಅತ್ಯುತ್ತಮವಾದ ಕತೆ. ಹೆಚ್ಚು ಕಡಿಮೆ ಇದೇ ಮಟ್ಟದಲ್ಲಿ ನಿಲ್ಲಬಹು ದಾದ ಇನ್ನೊಂದು ಕತೆ—'ಮೂಲಾನಕ್ಷತ್ರದ ಹುಡುಗಿ'. ಪದ್ದಿ ಮೂಲಾ ನಕ್ಷತ್ರದಲ್ಲಿ ಹುಟ್ಟಿದ ಹುಡುಗಿ. ಅವಳನ್ನು ಯಾರೂ ತಂದುಕೊಳ್ಳುವುದಿಲ್ಲ. ಆ ಕಾರಣದಿಂದ ಪದ್ದಿ, ತಾಯಿಯ ಎದೆಯಲ್ಲಿ ಮುರಿದ ಮುಳ್ಳಿನಂತಿದ್ದಳು. ಬಡತನದಲ್ಲಿ ಬೆಳೆದ ತಾಯಿಗೆ ಎದೆಯುದ್ದ ಬೆಳೆದು ನಿಂತ ಮಗಳನ್ನು ಮನೆ ಯಿಂದ ಹೇಗಾದರೂ ದಾಟಿಸಬೇಕೆಂಬ ಚಿಂತೆ. ಅದರಿಂದ ಬಂದವರೆದುರಿಗೆ ತನ್ನ ಮಗಳು ಚೆನ್ನಾಗಿ ಕಾಣಲೆಂಬಾಸೆಯಿಂದ ಪ್ರತಿ ಬಾರಿಯೂ ನೆರೆಮನೆ ಯಿಂದ ಬೇಡಿ ತಂದ ಪೌಡರು ಹಚ್ಚಿ ನಿಲ್ಲಿಸುತ್ತಿದ್ದಳು! ಆದರೆ ಪದ್ದಿಯದು ಮೂಲಾನಕ್ಷತ್ರ ಎಂದು ತಿಳಿದೊಡನೆಯೇ ಬಂದವರೆಲ್ಲ'ಪೇರಿ' ಕೀಳುತ್ತಿದ್ದರು. ಆ ತಾಯಿಯ ಹೃದಯದಲ್ಲಿ ಇದು ವಿಚಿತ್ರವಾಗಿ ಕೆಲಸಮಾಡಿ, ಮಗಳನ್ನು ವಿನಾ ಕಾರಣ ದ್ವೇಷಿಸುವಂತೆ ಮಾಡಿತು. ಅದನ್ನು ನೋಡಲಾರದೆ, ತಾಳ ಲಾರದೆ ಕಡೆಗೊಮ್ಮೆ ನೋಡಲು ಬಂದ ವಯಸ್ಸಾದ ಶ್ರೀಮಂತನೊಬ್ಬನಿಗೆ, ಎರಡನೆ ವರವಾದರೂ ತನ್ನ ಮೂಲಾನಕ್ಷತ್ರದ ಕಾಟಕ್ಕೆ ಹೆದರದ ಆತನಿಗೆ ಪದ್ದಿ ಮದುವೆಯಾಗುವೆನೆಂದು ಒಪ್ಪಿಗೆಯಿತ್ತಳು. ತನ್ನನ್ನಿಂದು ಜರೆಯುವ ತಾಯಿಯೇ, ನಾಳೆ ತಾನು ಸಿರಿವಂತಿಕೆಯಲ್ಲಿ ಮೆರೆಯುವಾಗ ಬಂದು ಮಗ ಕಿಟ್ಟಿಯ ಓದಿಗಾಗಿ ತನ್ನಿಂದ ಸಹಾಯ ಬೇಡುತ್ತಾಳೆ. ಅಷ್ಟೇ ಸಾಕು. ಪದ್ದಿಯ ಮನಸ್ಸು ಈ ನಿಲುವಿಗೆ ಬಂದು ಇಷ್ಟವಿಲ್ಲದ ಲಗ್ನಕ್ಕೆ ಸಮ್ಮತಿಯಿತ್ತಿತು. ಅನಂತರ—ಗಂಡನ ಮನೆಯಲ್ಲಿರುವಾಗ ತಾಯಿಗೆ ಕಾಯಿಲೆಯಾಗಿ ಬಂದು

ನೋಡಬೇಕೆಂದು ಕಾಗದ ಬರೆಸಿದರೂ ಪದ್ಮಿ ಹೃದಯವನ್ನು ಕಲ್ಲುಮಾಡಿ ಕೊಂಡು ಸುಮ್ಮನಿರುತ್ತಾಳೆ. ಆದರೆ ಕೆಲ ದಿನಗಳಲ್ಲಿ ಆ ಕಾಯಿಲೆಯಲ್ಲಿ ತಾಯಿ ಮೃತಳಾದಳೆಂದು ಸುದ್ದಿ ಬಂದಾಗ ಅವಳ ಕಣ್ಣು ತೆರೆಯುತ್ತದೆ. ''ತಾನು ತಾಯಿಯನ್ನು ದ್ವೇಷಿಸುವುದು ಸರಿಯೆ ? ತನ್ನ ಬಾಳು ಹುಡಿಗೂಡಿ ಸಲು ಅವಳನ್ನು ಪ್ರೇರೇಪಿಸಿದ್ದು ಇಂದಿನ ಸಮಾಜವಲ್ಲವೆ...?" ಎಂದು ವಿಚಾರ ಪರಳಾಗುತ್ತಾಳೆ. ಓದುಗನೂ ಅವಳ ಜೊತೆಗೆ ಇಂತಹ ವಿಪರೀತಗಳಿಗೆ ನಿಜ ವಾದ ಕಾರಣ ಎಲ್ಲಿದೆ ಎನ್ನುವುದನ್ನು ಮನಗಾಣುತ್ತಾನೆ. ಇಲ್ಲಿದೆ ಅನುಪಮಾ ದೇವಿಯವರ ವೈಶಿಷ್ಟ್ಯ.ಹಿಂದಿನ ಕತೆಗಾರ್ತಿಯರಾಗಿದ್ದರೆ ಪದ್ಮಿಗಾದ ಮದುವೆ ಯಲ್ಲಿ, ಕಣ್ಣೀರಿನಲ್ಲಿ, ಕತೆಯನ್ನು ಮುಕ್ತಾಯಗೊಳಿಸುತ್ತಿದ್ದರು. ಆದರೆ ಇವರು ಪದ್ಮಿಗೆ ಜ್ಞಾನೋದಯವಾಗುವಂತೆ ಮಾಡಿ ಈ ವಿಷ ಹೋಗಬೇಕಾ ದರೆ ವಿಷಪೂರಿತ ಸಮಾಜದ ಹಲ್ಲನ್ನೇ ಕೀಳಬೇಕಾಗುತ್ತದೆ, ಎಂಬ ಸತ್ಯವನ್ನು ಸೂಚ್ಯವಾಗಿ ಚಿತ್ರಿಸಿದ್ದಾರೆ.

''ಆ ಮೂರು ಮನೆಗಳು'' ಕತೆಯೂ ಈ ಸಮಾಜದಲ್ಲಿ ಹೆಣ್ಣಿಗಾಗುತ್ತಿ ರುವ ಅನ್ಯಾಯವನ್ನು ಪದರಪದರವಾಗಿ ಬಿಡಿಸಿ ಮೂರು ಮುಖವಾಗಿ ತೋರಿ ಸಿದೆ. ಕೆಳಮಧ್ಯಮವರ್ಗದಲ್ಲಿ ಜನಿಸಿ, ಗಂಡನ ದಬ್ಬಾಳಿಕೆಯ ಸುತ್ತಿಗೆಯ ಪೆಟ್ಟು ಗಳನ್ನು ತಿಂದು ತಿಂದು ಹಣ್ಣಾಗಿರುವ ಭಾಗ್ಯಮ್ಮನ ಹೆಣ್ಣು ಜೀವ, ಸಮಾಜದ ಸೂಳೆಯಾಗಿ ಮನವೊಡಂಬಡದಿದ್ದರೂ ಹೊಟ್ಟೆಗಾಗಿ ಸಿರಿವಂತರ ಕಾಮೋಪ ಭೋಗದ ಆಡುಂಬೊಲವಾಗಿ ತನ್ನ ದೇಹವನ್ನು ಮಾರ್ಪಡಿಸಿಕೊಂಡ ಸುಭದ್ರಾ ; ಇಡೀ ಬಾಳುವೆಯನ್ನೇ ದುಡಿತದಲ್ಲಿ ಸವೆಸಿದರೂ ಹೊಟ್ಟೆ ತುಂಬ ಅನ್ನ ಕಾಣದ, ಆದರೆ ''ಯಾವತ್ತಾದ್ರೂ ಒಮ್ಮೆ ಒಳ್ಳೇ ಕಾಲ ಬರ್ತದೆ'' ಎಂಬ ಗಂಡನ ಮಾತಿನಲ್ಲಿ ವಿಶ್ವಾಸವಿಟ್ಟು ಆ ಶುಭ ದಿನಕ್ಕಾಗಿ ಶಬರಿಯಂತೆ ಕಾದಿ ರುವ ಲಚುಮಿ—ಇವರ ದಾರುಣ ಕತೆಗಳನ್ನು ಬಿಡಿಸುತ್ತಾ ಕತೆಗಾರ್ತಿ ಸವಾಲು ಹಾಕುತ್ತಾರೆ. ''ಇವರೆಲ್ಲರ ಜೀವನದಲ್ಲಿ ರವಿ ಉದಯಿಸುವುದೆಂದಿಗೆ...?'' ತಂತ್ರ ದೃಷ್ಟಿಯಿಂದ ಈ ಕತೆ ಕನ್ನಡದಲ್ಲೊಂದು ಹೊಸ ಪ್ರಯೋಗ. ಪ್ರಸಿದ್ಧ ಉರ್ದು ಸಾಹಿತಿ ಕೃಷ್ಣಚಂದ್ರರ ''ಮಹಾಲಕ್ಷ್ಮಿ ಸೇತುವೆ'' ಕತೆಯ ಧಾಟಿ ಯಲ್ಲಿ ಇದು ರಚಿತವಾಗಿದೆ.

ಹೀಗೆಯೇ ಬಡ ಶಾಲಾ ಮಾಸ್ತರೊಬ್ಬರು ತಿಳಿವಳಿಕೆ ಪಡೆದು ಉಪಾ

ಧ್ಯಾಯರ ಸಂಘ ಕಟ್ಟಿ ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಟ ನಡೆಸಿ ಯಶ ಗಳಿಸಿದ "ಒಂದೇ ಜಾತಿ", ಎಲ್ಲರಿಗಾಗಿ ದುಡಿಯುವ ವಿದ್ಯಾರ್ಥಿ ಜಯರಾಂ ಕೂಲಿಕಾರರ ಕೇರಿಯಲ್ಲಿ ಪ್ಲೇಗು ರೋಗವಿದ್ದರೂ ಹೋಗಿ ಪ್ರಾಣ ಒಪ್ಪಿಸುವ "ಕಣ್ಮಣಿ". ದೇಶದ ಸ್ವಾತಂತ್ರ್ಯದಲ್ಲಿ ತ್ಯಾಗ ಮಾಡಿದವರು ಯಾರೋ ಅದರ ಸುಖ ಅನುಭವಿಸುವವರು ಯಾರೋ. ಇಂದಿನ ರಾಜಕೀಯದ ಈ ಸತ್ಯವನ್ನು ಎತ್ತಿ ತೋರುವ "ಪ್ರತಿಫಲ", ಗತಿಸಿದ ಮೋಹದ ಮಡದಿ ಇಂದಿಯ ನೆನಪಿಗಾಗಿ ಮುಂದಿನ ದಿನಗಳನ್ನೆಲ್ಲಾ ಷಹಜಹಾನನಂತೆ ಮುಡು ಪಾಗಿಟ್ಟ "ಷಹಜಹಾನ್ ಚಂದಣ್ಣ" ಈ ಎಲ್ಲಾ ಕತೆಗಳಲ್ಲೂ ಹೊಸ ಬಾಳಿ ಗಾಗಿ ಹಾತೊರೆಯುವ ಜೀವಿಗಳು ಸ್ಪಷ್ಟವಾಗಿ ಒಡೆದು ಮೂಡಿದ್ದರೂ ಕಲಾ ತ್ಮಕವಾಗಿ ಇವು ಮೇಲಿನ ಮೂರು ಕತೆಗಳ ಸಾಲಿನಲ್ಲಿ ನಿಲ್ಲುವ ಯೋಗ್ಯತೆ ಪಡೆದಿಲ್ಲ.

"ಸಾವಿನ ಮುಖ" ಈ ಸಂಕಲನದ ಕೊನೆಯ ಕತೆ. ಇದು ಅನುಪಮಾ ದೇವಿಯವರ ವ್ಯಕ್ತಿತ್ವದ ಹೊಸ ಸ್ವರೂಪವೊಂದನ್ನು ನಮಗೆ ಪರಿಚಯಮಾಡಿ ಕೊಡುತ್ತಿದೆ. ಮೊದಲ ಏಳು ಕತೆ ಓದಿದವರು ಈಕೆ ತೀರ ಗಂಭೀರವಾದ ಬರೆಹಗಾರ್ತಿ, ಈಕೆಯಲ್ಲಿ ಹಾಸ್ಯಕ್ಕೆ ಎಡೆಯಿಲ್ಲ ಎನ್ನುವ ತಪ್ಪು ಕಲ್ಪನೆಗೆ ಬರಲು ಅವಕಾಶವಿದೆ. ಆದರೆ ಈ ಕತೆ "ಛೆ, ಛೆ! ಹಾಗೆಂದಿಗಾದರೂ ತಿಳಿದು ಕೊಂಡೀರಿ!" ಎನ್ನುವಂತೆ ಹೆಣೆಯಲ್ಪಟ್ಟಿದೆ. ಮರ್‌ಕ್ಯುರಿಕ್ ಕ್ಲೋರೈಡ್ ವಿಷ ಕುಡಿದು ಪ್ರಾಣ ಬಿಟ್ಟ ಒಬ್ಬನ ಹೆಣ ನೋಡಿ ಮನೆಗೆ ಬಂದ ನಿಖಿಲ ನೀರು ಕುಡಿದು, ತಂಗಿಗೆ ತೋರಿಸಲೆಂದು ತಂದ ವಿಷವನ್ನೇ ಸೇವಿಸಿರುವೆನೆಂದು ಕಂಗಾಲಾಗಿ, ಪ್ರಾಣ ಬಿಡುವಂತಾಗುತ್ತಾನೆ. ಕಡೆ ಗಳಿಗೆಯಲ್ಲಿ ತಂಗಿ ಮೇಜಿನ ಮೇಲಿದ್ದ ಸೀಸೆಯನ್ನೆತ್ತಿ ಅವನೆದುರು ಹಿಡಿದಾಗ ನಿಖಿಲನಿಗೆ ಹೋದ ಜೀವ ಬಂದಂತಾಗಿ "ಹಾಗಾದರೆ ನಾನು ಕುಡಿದಿದ್ದು ಮರ್‌ಕ್ಯುರಿಕ್ ಕ್ಲೋರೈಡ್ ಅಲ್ಲ. ನೀರೇ!" ಎಂದು ಉದ್ಗಾರ ತೆಗೆಯುತ್ತಾನೆ. ಅನಂತರ ಅವನಿಗೇ ನಗು ಬಂದು ಹೊಟ್ಟೆ ಬಿರಿಯುವಂತೆ ನಗುತ್ತಾನೆ...ಇದೊಂದು ಶುದ್ಧ ನಗು ವಿನ ಕಾರಂಜಿ.

ಇಷ್ಟು ಸ್ವಾರಸ್ಯವಾದ, ಸಕಾಲಿಕವಾದ, ಅನುಪಮಾದೇವಿಯವರ 'ಕಣ್ಮಣಿ' ಕಥಾಸಂಕಲನವನ್ನು ಇಂಥಹ ಮುಗ್ಗಟ್ಟಿನ ಕಾಲದಲ್ಲಿ ಬೆಳಕಿಗೆ ತಂದ

ಪುರೋಗಾಮಿ ಪ್ರಕಾಶನದವರು ಅಭಿನಂದನಾರ್ಹರು. ಅನುಪಮಾದೇವಿಯವರ ಕಥನಕಲೆ ಹೀಗೇ ಬೆಳೆದು ವಿಸ್ತಾರಗೊಳ್ಳಲಿ, ಇಂದು ಬರಡಾಗಿ ಕಾಣುವ ಕನ್ನಡ ಕಥಾವೃಕ್ಷ ನಗುವ ಇಂತಹ ನೂರಾರು ಹೂ, ಹಣ್ಣುಗಳಿಂದ ಕನ್ನಡ ಜನಮನವನ್ನು ತಣಿಸಲಿ, ಎಂದು ಹಾರೈಸುವೆ.

**ಚದುರಂಗ**

ಜೂನ್ ೬, ೧೯೫೨
ಮೈಸೂರು

# ಕಥೆಗಳ ವಿವರ

# ಕಣ್ಮಣಿ

ಗೋಡೆಗೆ ತೂಗುಹಾಕಿದ್ದ ಗಡಿಯಾರದ ಕಡೆಗೇ ನೋಡುತ್ತಾ ಕುಳಿತಿದ್ದರು ಮುಖ್ಯೋಪಾಧ್ಯಾಯರು. ನಾಲ್ಕು ನಿಮಿಷಗಳಲ್ಲಿ ಐದು ಗಂಟೆಯಾಗುವುದು! ಶಾಲೆಯ ಗಂಟೆ ಹೊಡೆಯಲು ಇರುವ ಅವಧಿ ಅಷ್ಟೇ. ಅಷ್ಟರೊಳಗೆ ಜಯರಾಂ ಬಂದಾನೇನೋ ಎಂದು ಅವರು ಲೆಕ್ಕ ಹಾಕುತ್ತಿದ್ದರು.

ಇನ್ನೆಂಟು ದಿನಗಳಲ್ಲಿ ನಡೆಯಬೇಕಾದ ಸ್ಕೂಲ್ ಡೇ...ಅದರ ಸಂಭ್ರಮ, ಸಿದ್ಧತೆ—ಟೀ, ನಾಟಕ, ಇವೆಲ್ಲದರ ಕಡೆ ಸರಸರನೆ ಅವರ ಮನ ಹರಿಯ ತೊಡಗಿತು.

ಸ್ಕೂಲಿನ ಬೆಲ್ಲು ಬಾರಿಸಿತು. ಮನೆಗೆ ಹೊರಡಬೇಕಿನ್ನು. ಯೋಚನೆಗಳನ್ನು ಬದಿಗೆ ಸರಿಸಿ, ಅವರು ಹ್ಯಾಟನ್ನು ತಲೆಯ ಮೇಲಿರಿಸಿಕೊಂಡರು. ಮೇಜಿನ ಡ್ರಾಯರ್‌ನ ಬೀಗ ಹಾಕಿ ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ ಮರೆ-ಬಾಗಿಲು ಕಿರ್ ಎಂದು ಸಪ್ಪಳ ಮಾಡುತ್ತಾ ತೆರೆದುಕೊಂಡಿತು.

ಜಯರಾಂ ನಗುತ್ತಾ ಒಳಗೆ ಬಂದು, ''ಜಿಲ್ಲಾಧಿಕಾರಿಗಳು ಅಧ್ಯಕ್ಷ ರಾಗೋಕೆ ಒಪ್ಪಿದರು ಸಾರ್ !'' ಎಂದ, ಬೆವರೊರೆಸಿಕೊಳ್ಳುತ್ತಾ. ಮುಖ್ಯೋಪಾಧ್ಯಾಯರ ಮುಖ, ಸಂತೋಷದಿಂದ ಉಬ್ಬಿಹೋಯಿತು.

''ಅಂತೂ ಚೆನ್ನಾಗಿ ನಡೀಬೇಕಪ್ಪಾ ಸ್ಕೂಲ್ ಡೇ ! ಇನ್ನೇನು ನೀವೆಲ್ಲಾ ಹೊರಟುಹೋಗ್ತೀರಿ !'' ಎಂದರು.

*   *   *

...ಚೆನ್ನಾಗಿ ನಡೆಯಬೇಕೆಂದು ಅವರೆಲ್ಲ ಹಾರೈಸಿದ್ದ ಆ ಸ್ಕೂಲ್ ಡೇ ಬಂದೇ ಬಂತು. ಹುಡುಗರಲ್ಲಿ ಎಂದಿಲ್ಲದ ಸಡಗರ. ವೇದಿಕೆಯ ಶೃಂಗಾರ ಇನ್ನೂ ನಡೆದೇ ಇತ್ತು.

''ನಮಗೇನಾದರೂ ಕೆಲ್ಸ ಇದೆಯೇನೋ ?'' ಎಂದು ಬಂದು ಕೇಳಿದ ಗೆಳೆಯರಿಗೆ ಜಯರಾಂ ಕೆಲಸ ಒಪ್ಪಿಸಿದ.

''ಒಂದು ನಿಮಿಷ ನೋಡ್ಕೊಳ್ರೋ...ಒಂದು ಲೋಟ ಕಾಫಿ ಬಸ್ಕೊಂಡು ಬರ್ತೀನಿ'' ಎಂದ. ಅವನ ಕೆಲಸವನ್ನು ಅವರೆಲ್ಲಾ ನಾನು—ತಾನು ಎಂದು ಹಂಚಿಕೊಂಡರು.

"ಜಯರಾಂಗೆ ಮಧ್ಯಾಹ್ನ ಊಟವೇ ಇಲ್ಲ" ಎಂದ ಗೆಳೆಯ ರಂಗಸ್ವಾಮಿ.

"ನೋಡು ರಂಗಸ್ವಾಮಿ, ಜಯರಾಂನ ಹಾಗೆ ಕೆಲ್ಸ ಮಾಡೋರನ್ನ ನಾನು ಕಂಡೇ ಇಲ್ಲವೊ!" ಎಂದ ಇನ್ನೊಬ್ಬ ಸ್ನೇಹಿತ.

ಜಯರಾಂ ಕಾಫಿ ಕುಡಿದು ಬಂದಮೇಲೂ ಅವನಿಗೆ, ಅವರು ಕೆಲಸ ಕೊಡಲಿಲ್ಲ.

"ಒಂದೇ ಸಮನೆ ಕೆಲ್ಸ ಮಾಡಿದ್ದೀ—ಸುಧಾರಿಸ್ಕೋ!" ಎಂದರು.

ಒಂದಾದ ಮೇಲೊಂದು—ಗೊತ್ತಾಗಿದ್ದ ಕಾರ್ಯಕ್ರಮ ಕ್ರಮಬದ್ಧವಾಗಿ ನಡೆಯಿತು. ಮೊದಲು ಪ್ರಾರ್ಥನೆ, ವರದಿ, ಅಧ್ಯಕ್ಷ ಭಾಷಣ, ನಾಟಕ, ಹೀಗೇ . . .

ನಾಟಕದಲ್ಲಿ ಜಯರಾಮನ ನಟನಾ ಸಾಮರ್ಥ್ಯ ನೋಡಿ ಜಿಲ್ಲಾಧಿಕಾರಿಗಳು ಮೂಗಿನ ಮೇಲೆ ಬೆರಳಿಟ್ಟರು. ಪಕ್ಕದಲ್ಲೇ ಕುಳಿತಿದ್ದ ಮುಖ್ಯೋಪಾಧ್ಯಾಯರ ಕಡೆಗೆ ಬಾಗಿ, "ಆ ಹುಡುಗ ಯಾರು ?" ಎಂತ ಕೇಳಿದರು.

"ಜಯರಾಂ" ಎಂದರು ಮುಖ್ಯೋಪಾಧ್ಯಾಯರು. ಆ ತಮ್ಮ ಶಿಷ್ಯ ಒಳ್ಳೆಯ ಪ್ರತಿಭಾವಂತ—ಎಂದರು.

ತಮ್ಮ ಭಾಷಣದ ನಡುವೆ ಜಿಲ್ಲಾಧಿಕಾರಿಗಳು. "ನಾನು ಅವನನ್ನು ನೋಡಬೇಕು" ಎಂದು ಹೇಳಿದಾಗ, ವಿದ್ಯಾರ್ಥಿಗಳೆಲ್ಲ ಡಬಡಬನೆ ಮೇಜು ಬಡಿದು "ಜಯರಾಂ...ಜಯರಾಂ" ಎಂದು ಕಿರಿಚಿಕೊಂಡರು. ಜಯರಾಂ ಗ್ರೀನ್ ರೂಮಿನಿಂದ ಹೊರಗೆ ಬರಲೇಬೇಕಾಯಿತು. ಜಿಲ್ಲಾಧಿಕಾರಿಗಳು ತುಂಬ ಪ್ರೀತಿಯಿಂದ ಅವನ ಕೈ ಹಿಡಿದು ಕುಲುಕಿದರು. ಹೋಗುವ ಮುನ್ನ ಜಯರಾಂ ಸಭೆಯ ಕಡೆಗೆ ತಿರುಗಿ, ಕೈ ಮುಗಿದು, "ಇದನ್ನು ಯಶಸ್ವಿಯಾಗಿ ನಡೆಸಿಕೊಟ್ಟ ಭಾರ ನಿಮ್ಮದು...ಏನಾದರೂ ತಪ್ಪಿದ್ದರೆ ನೀವೆಲ್ಲಾ ಮನ್ನಿಸಬೇಕು. ಹೊಗಳುವಂತಹುದು ಏನಿದ್ದರೂ ಅದು ನಿಮ್ಮ ಔದಾರ್ಯ" ಎಂದು ಹೇಳಿ ಮುಗಿಸಿದ.

...ಬಂದಿದ್ದ ಅತಿಥಿಗಳೆಲ್ಲಾ ಹೊರಟುಹೋದಮೇಲೂ, ಸಾವಿರ ಕೈಗಳಿಂದ ಮಾಡಿದರೂ ಮುಗಿಯುದಷ್ಟು ಕೆಲಸವಿತ್ತು.

ಜಯರಾಂ ಮೇಜಿಗೊರಗಿ, "ತಲೆ ಸಿಡಿಯುತ್ತದರೋ ಯಾಕೋ ?" ಎಂದ.

"ನೀನು ಸುಮ್ಮನೆ ಕುಳಿತುಕೋ ಮಾರಾಯ—ನಾವೆಲ್ಲಾ ಮಾಡ್ತೀವಿ" ಎಂದು ಬಲವಂತದಿಂದ ಅವನನ್ನು ಗೆಳೆಯರು ಹಿಡಿದು ಕುಳ್ಳಿರಿಸಿದರು.

ಸುಮ್ಮನೆ ಕುಳಿತುಕೊಂಡರೂ ಅವನ ಮೆದುಳಿಗೆ ಶಾಂತಿಯಿರಲಿಲ್ಲ. ಅದನ್ನು ಗಮನಿಸಿದವನಂತೆ ರಂಗಸಾಮಿ ಅವನ ಬಳಿಗೆ ಬಂದು, "ಏನೋ ಯೋಚಿಸ್ತಿದ್ದೀ ತುಂಬಾ ?" ಎಂತ ಕೇಳಿದ.

ಜಯರಾಂ ತಲೆ ಹಿಡಿದುಕೊಂಡೇ, "ಇವತ್ತು ಕೇರಿಗೆ ಹೋಗಲೇ ಇಲ್ಲ ಕಣೋ. ಅಲ್ಲೇನಾಗಿದೆಯೋ ಏನೋ" ಎಂದ. ಕೇರಿ ಎಂದರೆ ಕಾರ್ಮಿಕರ ಕೇರಿ: ದಿನವೂ ಸಂಜೆ ಜಯರಾಂ ಅಲ್ಲಿಗೆ ಹೋಗುತ್ತಿದ್ದುದು ರಂಗಸಾಮಿಗೆಗೊತ್ತಿತ್ತು.

"ನಿನಗ್ಯಾವಾಗ್ಲೂ ಅದೇ ಯೋಚನೆ. ಇವತ್ತೊಂದು ದಿನ ಹಾಯಾಗಿರಪ್ಪಾ ಸಧ್ಯ!" ಎಂದ ರಂಗಸಾಮಿ.

ಜಯರಾಂ ಮುಗುಳುನಗಲು ಯತ್ನಿಸಿದ.

* * *

ಸಮುದ್ರದಂತೆ ಹರಡಿದ್ದ ಆ ಮಿಲ್ ಕೂಲಿಗಾರರ ಮಧ್ಯೆ ಜಾಗ ಬಿಡಿಸಿಕೊಂಡು ನಾರಾಯಣ ಬೇಗ ಬೇಗ ಹೆಜ್ಜೆಹಾಕ ಹತ್ತಿದ. ಕೆಲಸದ ಜೊತೆಗೆ ಮಿಲ್ಲಿನ ಯಜಮಾನರು ಕರೆಸಿ ಹೇಳಿದ ಮಾತು ಅವನ ಮನಸ್ಸನ್ನು ಕೊರೆಯುತ್ತಿತ್ತು. ದುಡಿದು ಹಣ್ಣಾಗಿ ಬಳಲಿದ ಶ್ರಮದ ಜೊತೆಗೆ, ಯೋಚನೆಯೂ ಸೇರಿ ಅವನನ್ನು ಘಾಸಿಗೊಳಿಸಿತ್ತು.

ದಿನವೂ ಬರುತ್ತಿದ್ದುದಕ್ಕಿಂತ ಮುಂಚೆ ಆತ ಬಂದುದನ್ನು ಗಮನಿಸಿದಳು, ಕೊಳಾಯಿಯಲ್ಲಿ ನೀರು ಹಿಡಿಯುತ್ತಾ ನಿಂತಿದ್ದ ಲಲಿತ. ಲಗುಬಗೆಯಿಂದ ಬಿಂದಿಗೆಯನ್ನೆತ್ತಿಕೊಂಡು ಆಕೆ ಮನೆ ಮುಟ್ಟುವ ಹೊತ್ತಿಗೆ ನಾರಾಯಣ ಬಂದು ಆಗಲೇ ಹಾಸಿಗೆಯ ಮೇಲೊರಗಿದ್ದ. ಲಲಿತ ಅವನ ಕಡೆ ಒಮ್ಮೆ ತಿರುಗಿ ನೋಡಿ, ಬಿಂದಿಗೆಯನ್ನೆತ್ತಿಕೊಂಡು ಒಳಗೆ ಹೋದಳು.

"ಊಟ ಮಾಡ್ತೀರಾ ?" ಎಂದು ಹೊರಗೆ ಬರುತ್ತಾ ಆಕೆ ಕೇಳಿದ ಪ್ರಶ್ನೆಗೆ, "ಜಯರಾಂ ಬರಲಿಲ್ಲವೆ ಇನ್ನೂ ?" ಎಂಬ ಮರುಪ್ರಶ್ನೆ ಬಂತು.

ಇಲ್ಲವೆಂಬಂತೆ ಆಕೆ ತಲೆಯಾಡಿಸಿದಳು. ಎಂದಿನಂತೆ ಮನೆಯಲ್ಲೆಲ್ಲಾ ಕಸ ಗುಡಿಸಿ, ಪಾತ್ರೆಗಳನ್ನೆಲ್ಲಾ ಲಲಿತ ಬೆಳಗುವ ಹೊತ್ತಿಗೆ. ಪೂರ್ಣ ಕತ್ತಲೆಯಾಯಿತು.

ಆಕೆ ದೀಪ ಹಚ್ಚುತ್ತಿದ್ದಾಗ, "ಜಯರಾಂ ಇನ್ನೂ ಬರಲಿಲ್ಲವಲ್ಲಾ" ಎಂದ ನಾರಾಯಣ. ಮೆಲ್ಲನೆದ್ದು, ಆ ಪಡಸಾಲೆಯಲ್ಲೇ ಒಂದು ಮೂಲೆಯಲ್ಲಿದ್ದ ಜಯರಾಮನ ತೆರೆದ ಬೀರುವಿನ ಬಳಿ ಹೋದ. ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಅವನ ಪುಸ್ತಕಗಳನ್ನು ಜೋಡಿಸತೊಡಗಿದ. ಲಲಿತ ಅಲ್ಲೇ ದೀಪದ ಕೆಳಗೆ ಬಾಗಿಲ ಬಳಿ ಕುಳಿತಳು.

"ಜಯನ ಓದು ಇನ್ನು ಮುಗಿಯಿತು ಕಣೆ..." ಎಂದ ನಾರಾಯಣ.

"ಯಾಕೆ ?" ಎಂದಳು ಮುಂಗ್ದೆ ಲಲಿತ.

"ಯಾಕೆ ! ಎಲ್ಲಿಂದ ತರೋಣ ದುಡ್ನ ?"

ಲಲಿತ ಒಂದು ಗಳಿಗೆ ಸುಮ್ಮನಿದ್ದಳು. "ಜಯನ್ನ ಓದು ಬಿಡಿಸಬಾರದು. ಅವನೊಬ್ಬನಾದರೂ ಓದಲಿ" ಎಂದಳಾಕೆ.

ಎರಡು ನಿಮಿಷ ಕಳೆದಿರಲಿಲ್ಲ. ಜಯರಾಂ ಒಳಗೆ ಬಂದ. ಅವನ ಮುಖ ಆಯಾಸದಿಂದ ಬಳಲಿಹೋಗಿತ್ತು. ಬಂದವನೇ ಚಪ್ಪಲಿ ಮೂಲೆಗೆಸೆದು ಹಾಸಿಗೆಯ ಮೇಲುರುಳಿಕೊಂಡ.

"ಯಾಕೋ ಇವತ್ತು ಇಷ್ಟು ಹೊತ್ತು" ಎಂದು ನಾರಾಯಣ ಮೃದುವಾಗಿ ಕೇಳಿದ.

"ಕೇರೀಲಿ ಇದ್ದಕ್ಕಿದ್ದಂತೆ ಪ್ಲೇಗು ಸುರುವಾಗಿದೇಣ್ಣಾ. ಅವರಿಗೆಲ್ಲಾ ಧೈರ್ಯ ಹೇಳಿ, ಹೆಲ್ತ್ ಆಫೀಸಿಗೆ ಹೋಗಿ, ಇವ್ಯಾಕುಲೇಷನ್ ಸೌಲಭ್ಯ ಒದಗಿಸಬೇಕೂಂತ ಕೇಳಿಕೊಂಡು ಬರೋದು ಇಷ್ಟೊತ್ತಾಯಿತು. ಇವತ್ತು ಏನಿಲ್ಲಾಂದ್ರೂ ಎಂಟು ಹತ್ತು ಜನ ಸತ್ತಿದ್ದಾರೆ. ನಿನ್ನೆ ಬೇರೆ ಸ್ಕೂಲ್ ಡೇ ! ಓಡಾಡೀ ಓಡಾಡೀ ಕಾಲು ನೋಯ್ತಿದೆ."

ನಾರಾಯಣ ಮುಂಚಿನದೇ ಮೃದು ಸ್ವರದಲ್ಲಿ "ನೀನಿನ್ನು ಅಲ್ಲಿಗೆ ಹೋಗಬೇಡ ಜಯಾ...ಪ್ಲೇಗು ಸೋಂಕು ರೋಗ!" ಎಂದು ಹೇಳಿದ.

"ಓ..." ಎಂದು ಜಯರಾಂ ಅಸಮ್ಮತಿಯ ಉದ್ಗಾರ ತೆಗೆದ.

ಊಟಕ್ಕೆ ಕುಳಿತಾಗ ನಾರಾಯಣ ಮೆಲ್ಲನೆ ಪೀಠಿಕೆ ಹಾಕಿ, "ಮಿಲ್ ಯಜಮಾನ್ರು ನನ್ನ ಕರೆಸಿದ್ರು!" ಎಂದ.

ಜಯರಾಮನ ಕೈಯಲಿದ್ದ ತುತ್ತು ಹಾಗೆ ತಡೆದು ನಿಂತಿತು.

"ನಿನ್ನ ವಿಷಯ ಹೇಳಲಿಕ್ಕೇ ನನ್ನ ಕರೆಸಿದ್ದು !"

"ಏನು, ನನಗೊಂದು ಕೆಲ್ಸ ಕೊಡಿಸ್ತೀನಿ ಎಂತ ಹೇಳಿದರೊ ?"

"ಆ ವಿಷಯ ಅಲ್ಲ, ಜಯ. ನೀನು ಸ್ಕೂಲಿಗೆ ಹೋಗೋದು ಬಿಟ್ಬ್ಟು ಕೂಲಿ ಕಾರ್ನೆಲ್ಲಾ ಎತ್ತಿಕಟ್ತೀಯಂತೆ. ಅದಕ್ಕೆ—"

"ಅದಕ್ಕೇನಂತೆ ?" ಎಂದು ಒರಟಾಗಿಯೇ ಕೇಳಿದ ಜಯ. ಕೆಂಪಗಾಯಿತು ಅವನ ಮುಖ. ತಮ್ಮನ ಕಡೆಗೆ ನೋಡದೆಯೇ ನಾರಾಯಣ ಮುಂದುವರಿಸಿದ.

"ನಾವು ಇದ್ದಿದ್ದರಲ್ಲಿ ಸುಖವಾಗಿದ್ದೇವೆ, ಕೂಲಿಕಾರರಿಗಿಂತ. ಅವರ ತಂಟೆ ನಮಗ್ಯಾಕೋ ?"

"ಛೀ ! ಏನು ಮಾತಣ್ಣಾ ಇದು...? ಅವರ ತಂಟೆ ಯಾಕೆ ಅಂತೀಯಾ ? ಅವರು ಬೇರೆ ನೀನು ಬೇರೆ ಏನು ? ನಾವೆಲ್ಲಾ ಮಾಲೀಕರ ಕಾಲಕೆಳಗೆ ಇಷ್ಟು ದಿನ ತುಳಿಸಿಕೊಂಡದ್ದು ಸಾಲದೇನೋ ? ನಾವು ಪಡ್ತಾ ಇರೋ ಕಷ್ಟಕ್ಕೆ ಸರಿಯಾದ ಪ್ರತಿಫಲ ಸಿಗ್ತಾ ಇದೆಯೋ ಈಗ ? ನಮ್ಮ ರಕ್ತ ಹೀರಿ ಇವರು ತಮ್ಮ ಖಜಾನೆ ಬೆಳಸ್ಕೋತಿದಾರೆ. ನಮ್ಮ ಎಲುಬು ಪುಡಿಮಾಡಿ ಅದರ ಮೇಲೆ ತಮ್ಮ ಮಹಲು ಕಟ್ಟಿಸಿಕೋತಿದಾರೆ...ತಾವು ಮಾತ್ರ ಇದ್ದಹಾಗೇ ಇದೇವೆ. ಕೊನೇವರೆಗೂ ನಾವು ಹೀಗೇ ಇರ್ಬೇಕೂಂತಾ ನಿನ್ನಿಷ್ಟ ?"

ನಾರಾಯಣನ ಮುಖ ಸಪ್ಪಗಾಯಿತು.

"ಹಾಗಲ್ಲ ಜಯಾ. ಯಜಮಾನರ ಮಾತು ನಾವು ಕೇಳಬೇಕು."

ಊಟ ಮುಗಿದರೂ ಚರ್ಚೆ ಬೆಳೆಯಿತು. ತಮ್ಮ ವಾದಿಸುತ್ತಲೇ ಹೋದ. "ಕೇಳೋ ಕಾಲ ಆಗಿಹೋಯ್ತು. ಈಗ ಕೆಲ್ಸ ಮಾಡೋಕಾಲಾಣ್ಣ. ನಾವೆಲ್ಲಾ ಒಂದಾದ್ರೆ ಎದುರಿಸೋ ಶಕ್ತಿ ಯಾರಿಗಿದೆ ನೋಡೋಣ. ನಮ್ಮ ಶಕ್ತೀಲೇ ನಂಬಿಕೆ ಇಲ್ಲ ನಿನಗೆ. ನಮಗೆ ಜಯ ಆಗಿಯೇ ಆಗುತ್ತೆ ನೋಡು."

"ನಿನ್ನ ಹಟ ನಿಂಗೆ" ಎಂದ ನಾರಾಯಣ ಸಿಟ್ಟಿನಿಂದ.

ಅಲ್ಲಿಗೆ ಮಾತು ನಿಂತು ಅವರು ಮಲಗಿಕೊಂಡರು.

ಜಯರಾಂಗೆ ನಿದ್ದೆ ಬರಲಿಲ್ಲ. ಅಣ್ಣನೊಡನೆ ಜಗಳಾಡಿದಾಗಲೆಲ್ಲ ಅವನಿಗೆ ಗತಿಸಿದ ತಾಯಿಯ ನೆನಪಾಗುತ್ತಿತ್ತು. ಊರ ಗೋಪುರದ ಗಡಿಯಾರದಲ್ಲಿ ಹನ್ನೆರಡು ಹೊಡೆಯುವವರೆಗೂ ಅತ್ತ-ಇತ್ತ ಹೊರಳಾಡಿದ. ಮತ್ತೆ ಮೆಲ್ಲನೆ ನಿದ್ದೆ, ಬಳಲಿದ ಆ ದೇಹವನ್ನು ಆವರಿಸಿತು.

* * *

ಮರುದಿನ, ಅಭ್ಯಾಸ ಬಲದಿಂದ ಐದು ಗಂಟೆಗೇ ಎಚ್ಚರವಾದರೂ, "ಇವತ್ತು ಭಾನುವಾರ" ಎಂದು ಮುಸುಕುಹಾಕಿಕೊಂಡು ಮಲಗಿದ ನಾರಾಯಣ. ಚೆನ್ನಾಗಿ ನಿದ್ದೆ ಹತ್ತಿತು. ಎಂಟೂವರೆ ಗಂಟೆಯ ವೇಳೆಗೆ ಲಲಿತ ತಟ್ಟಿ ಎಬ್ಬಿಸಿದಳು. ಗಡಿಬಿಡಿಯಿಂದೆದ್ದು ಮುಖ ತೊಳೆದು ಬಂದ. ಜಯ ಇನ್ನೂ ಎದ್ದಿರಲಿಲ್ಲ. ರಾತ್ರಿಯ ಸಂಭಾಷಣೆಯನ್ನು ಆಗಲೇ ಮರೆತಿದ್ದ ನಾರಾಯಣ. ಹೋಗಿ ಅವರನ್ನು ಕೂಗಿ ಕರೆದ:

"ಜಯಾ—ಜಯರಾಮೂ..."

ಜಯ ಬೆಚ್ಚಿದವನಂತೆ ಕಣ್ಣುಬಿಟ್ಟ.

"ಯಾಕಿನ್ನೂ ಮಲಗಿದ್ದೀಯಾ?"

"ಏನೂ ಇಲ್ಲ. ಸ್ವಲ್ಪ ತಲೆ ನೋವು ಅಷ್ಟೆ" ಎಂದ ಜಯರಾಮು. ನಾರಾಯಣ ಹಣೆ ಮುಟ್ಟಿ ನೋಡಿದ. ಹಣೆ ಸಿಡಿಯುತ್ತಿತ್ತು.

"ಇದೇನೋ ಬಹಳ ಜ್ವರ ಬಂದ ಹಾಗಿದೆಯಲ್ಲೋ?"

ಜಯರಾಂ ಮಾತಾಡಲಿಲ್ಲ. ಮೇಲೇಳಲು ಹೋದ. ಆಗಲಿಲ್ಲ. ಹಾಗೇ ಹಿಂದೆ ಒರಗಿದ.

ಅವನ ಅಣ್ಣ ಮತ್ತು ಅತ್ತಿಗೆ ಗಾಬರಿಯಾದರು. ನಾರಾಯಣ ಆಸ್ಪತ್ರೆಗೆ ಧಾವಿಸಿದ.

ಲಲಿತ ಮಾಡಿಕೊಟ್ಟ ಕಾಫಿ ಕುಡಿದು ಜಯರಾಮ ಮತ್ತೆ ಮಲಗಿಕೊಂಡಾಗ, ಸಹಪಾಠಿ ರಂಗಸ್ವಾಮಿ ಒಳಕ್ಕೆ ಬಂದ.

"ಇದೇನೋ ಮಲಗಿದ್ದೀ? ಜ್ವರಾನೇನೋ?"

ಎಂದ ಆತ ಕಸಿವಿಸಿಯಿಂದ.

"ಏನು ಜ್ವರಾನೋ ಹಾಳು...ಹೀಗೇ ಸ್ಕೂಲ್‌ತನಕ ಹೋಗ್ಬೇಕಾಗಿತ್ತು. ಇವತ್ತಿನ್ನೂ ಎಷ್ಟು ಕೆಲ್ಸ ಇತ್ತೂಂತಿ..."

"ಕೆಲ್ಸ ಮುಂದಾಮೋಚಿತು. ನೀನು ಹುಶಾರಾಗು ಸದ್ಯ. ಪರೀಕ್ಷೆ ಹತ್ತಿರ ಬಂತಲ್ಲಾ!"

ಸ್ವಲ್ಪ ಹೊತ್ತಿದ್ದು ಪುನಃ ಬರುವೆನೆಂದು ಹೇಳಿ ರಂಗಸ್ವಾಮಿ ಹೊರಟು ಹೋದ. ಬಿಸಿಲೇರುತ್ತಾ ಜ್ವರದ ಉದ್ವೇಗ ಜಾಸ್ತಿಯಾಗಿ ಜಯರಾಂ ಕನವರಿಸಿಕೊಳ್ಳತೊಡಗಿದ.

ನಾರಾಯಣ ತಂದ ಔಷಧಿ ಕುಡಿದ ಮೇಲೆ ಸ್ವಲ್ಪ ಹಾಯೆನಿಸಿತು. ಜಯರಾಂ ಕಣ್ಣುತೆರೆದು ಲಲಿತ–ನಾರಾಯಣರ ಕಡೆ ನೋಡಿ ನಕ್ಕನು. ನಾರಾಯಣನಿಗೆ ಹೋದ ಜೀವ ಬಂದ ಹಾಗಾಯಿತು.

''ನಿಮ್ಮ ತಮ್ಮ ಗುರೂಗೆ ಒಂದು ಕಾಗದ ಹಾಕಿ'' ಎಂದಳು ಲಲಿತ. ಆದರೆ ನಾರಾಯಣ ''ಗಾಬರಿಗೆ ಕಾರಣವಿಲ್ಲ'' ಎಂದು, ಕಾಗದ ಹಾಕಲಿಲ್ಲ.

ಸಂಜೆ ಮತ್ತೆ ಮೈ ಕಾದು ಕೆಂಡವಾಯಿತು.

ರಾತ್ರಿಯೆಲ್ಲಾ ಒಂದು ಗಳಿಗೆಯೂ ನಿದ್ದೆ ಮಾಡದೆ ನಾರಾಯಣ ಲಲಿತಾ ಜಯರಾಮನ ಆರೈಕೆ ಮಾಡಿದರು. ಮತ್ತೆ ಬೆಳಗಾದಮೇಲೆ ಅವರಿಗೆ ಚೈತನ್ಯ ಬಂತು. ಇನ್ನು ಭೀತಿ ಇಲ್ಲ—ಎಂದುಕೊಂಡರು.

ಹತ್ತು ಗಂಟೆಗೆ ಸರಿಯಾಗಿ ರಂಗಸಾಮಿ ಬಂದ. ಲಲಿತ ಆಗ ಅಕ್ಕಿ ಆಯುತ್ತಿದ್ದಳು.

''ವಾಸಿಯೇನ್ರೀ ಜಯರಾಮುಂಗೆ ? ಈಗ ಹೇಗಿದೆ ?'' ಎಂತ ಆತ ಕೇಳಿದ. ಲಲಿತಾ ಇಳಿಮೋರೆಯಿಂದ, ''ಹಾಗೆ ಇದೇಪ್ಪಾ'' ಎಂದಳು.

ರಂಗಸಾಮಿ ಒಳಗೆ ಹೋದಾಗ ತನ್ನ ಯಾರೋ ಕೂಗಿದ ಶಬ್ದವಾಗಿ ಜಯರಾಂ ಕಣ್ದೆರೆದು ನೋಡಿದ.

ರಂಗಸಾಮಿಯನ್ನು ಗುರುತಿಸಿ ''ಬಾ'' ಎಂದಷ್ಟೇ ಹೇಳಿದ.

ರಂಗಸಾಮಿ ಹಾಸಿಗೆಯ ಬದಿಯಲ್ಲೇ ಕುಳಿತು ಜಯರಾಂನ ಕೈಯನ್ನು ತನ್ನ ಕೈಲಿ ತೆಗೆದುಕೊಂಡ.

''ಎಷ್ಟು ಇಳಿದುಹೋಗಿದ್ದೀಯೋ ಮಾರಾಯ! ಒಳ್ಳೇ ಆಸಾಮಿಯಪ್ಪ ಅಂತೂ.''

ಜಯರಾಂ ಮೆಲುನಗೆ ನಕ್ಕ. ಸ್ವಲ್ಪ ಹೊತ್ತು ಸುಮ್ಮನಿದ್ದು, ರಂಗಸಾಮಿ, ''ಹೆಡ್‌ಮೇಷ್ಟ್ರು ನಿನ್ನ ಕೇಳಿದ್ರುಕಣೋ'' ಎಂದ.

''ಹೇಳೀದಿಯಾ, ಖಾಯಿಲೇಂತಾ ?''

''ಇಲ್ಲ...ಅಂದ್ಹಾಗೆ, ನಿನ್ನ ಕೆಮಿಸ್ಟ್ರಿ ನೋಟ್ಸ್ ಬೇಕು ಸ್ವಲ್ಪ.''

''ಯಾಕೋ ತುಂಬಾ ಸುಸ್ತಪ್ಪಾ. ಏಳೋಕಾಗೋಲ್ಲ ಇವತ್ತು. ನಾಳೆ ಬಾರೋ. ಹುಡುಕಿಟ್ಟಿರ್ತೀನಿ...ಸರೀನಾ ?''

''ರೈಟೋ...ಆದ್ರೆ ಬೇಗ ವಾಸಿಮಾಡಿಕೋಬೇಕಪ್ಪಾ!'' ಎಂದ ರಂಗಸಾಮಿ

ಅವನ ಕೈ ತಟ್ಟಿ ಹೊರಟ.

ಆ ದಿನ ನಾರಾಯಣ ಮಿಲ್ಲಿಗೆ ಹೋಗಲೇ ಇಲ್ಲ ಏನೋ ಭೀತಿ ಇತ್ತು ಅವನ ಮನಸ್ಸಿನಲ್ಲಿ. ಸಂಜೆ ಇಳಿಹೊತ್ತಿನ ವೇಳೆಗೆ ದೇವನಹಳ್ಳಿಯಲ್ಲಿ ಕಾಂಪೌಂಡರ್ ಆಗಿದ್ದ ಗುರುಸ್ವಾಮಿ-ನಾರಾಯಣನ ಇನ್ನೊಬ್ಬ ತಮ್ಮ ಬಂದ. ನಾರಾಯಣನಿಗೆ ಆಶ್ಚರ್ಯವಾಯಿತು.

''ಇದೇನೋ ಗುರೂ...! ಹೇಳದೆ ಕೇಳದೇ ಜಂಪ್ ಅಂತ ಆಕಾಶದಿಂದ ಇಳಿದುಬಂದಿದೀಯಲ್ಲೋ!" ಎಂದು ಕೇಳಿದ.

''ಸುಮ್ಮನೆ ನೋಡಿ ಹೋಗೋಣಾಂತನ್ನಿಸ್ತು. ಬಂದ್ಬಿಟ್ಟೆ. ಎಲ್ರೂ ಆರೋಗ್ಯ ತಾನೆ? ಇದೇನು ಜಯಾ ಮಲಗಿದಾನೆ?'' ಎಂತ ಗುರು, ಟೋಪಿಯನ್ನು ತೆಗೆದು ಗೂಟಕ್ಕೆ ನೇತುಹಾಕಿದ.

''ಅವನಿಗೆ ನಿನ್ನೆಯಿಂದ ಜ್ವರ'' ಎಂದು ಲಲಿತಾ ಹೇಳಿದಳು.

ಗುರು, ಜಯಾನ ನಾಡಿ ಪರೀಕ್ಷಿಸಿದ. ಹೊಟ್ಟೆ ಅಮುಕಿ ನೋಡಿದ. ಕೈ ಹಿಸುಕಿ ನೋಡಿದ. ಅವನೆದೆ ಧಸಕ್ ಎಂದಿತು.

"ಇದು ಕೆಟ್ಟ ಜ್ವರಾನಣ್ಣಾ!'' ಎಂದ ಗಾಬರಿಯಿಂದ.

''ಆ...'' ಎಂದು ತೆರೆದ ಬಾಯಿ ತೆರೆದಹಾಗೇ ನಾರಾಯಣ ಉದ್ಗಾರ ತೆಗೆದ.

''ಆ ಕೂಲಿಕಾರರ ಕೇರಿಗೆ ಹೋಗಬೇಡಾಂದ್ರೆ ಜಯಾ ಕೇಳ್ಬೇಕಲ್ಲಾ'' ಎಂದು ಲಲಿತ ಮುಖ ಮುಚ್ಚಿಕೊಂಡಳು. ಜಯರಾಂ ಸುಮ್ಮನೆ ಅವರನ್ನೆಲ್ಲಾ ದಿಟ್ಟಿಸಿದ. ಗುರುವನ್ನು ಕಂಡೊಡನೆ ಅವನ ಒಣಮುಖದಮೇಲೆ ನಗೆಯ ಮಿಂಚೊಂದು ಸುಳಿದುಹೋಯಿತು.

''ಅಣ್ಣಾ, ಆಸ್ಪತ್ರೆಗೆ ಸೇರಿಸಿಬಿಡೋಣ'' ಎಂದು ಗುರು ಸಲಹೆಯಿತ್ತ.

''ಆಗ್ಲೇ ಏಳು ಗಂಟೆ ಆಗಿಹೋಯ್ತು. ಇನ್ನೇನಪ್ಪಾ ಇಷ್ಟು ಹೊತ್ನಲ್ಲಿ? ರಾತ್ರಿ ಒಂದು ಕಳೀಲಿ. ಬೆಳಿಗ್ಗೇನೇ ಸೇರಿಸಿಬಿಡೋಣ...ಎಷ್ಟು ಬೇಕಾದ್ರೂ ಖರ್ಚಾಗ್ಲಿ—ಬೇಕಾದ್ರೆ ನನ್ನ ಜೀವ ಕೊಟ್ಟಾದ್ರೂ ಅವನ ಜೀವ ಉಳಿಸ್ತೀನಿ'' ಎಂದು ನಾರಾಯಣ ಮೈಮರೆತು ಕೂಗಾಡಿದ.

''ಸುಮ್ಮನೆ ಅಪಶಕುನ ನುಡೀಬೇಡ್ರೀ'' ಎಂದು ಲಲಿತ ಅಳಲು ಮೊದಲಿಟ್ಟಳು.

ರಾತ್ರೆಯಶಾಯಿತು. ಎಲ್ಲರನ್ನೂ ವಂಕು ಕವಿಯಿತು. ಭಯ ಬೇರೂರಿ ಮನದಲ್ಲಿ ನೆಲೆಸಿಬಿಟ್ಟಿತು.

"ರಾತ್ರೆ ಕಳೆದರೆ ಮತ್ತೆ ಹೆದರಿಕೆ ಇಲ್ಲ" ಎಂದು ಗುರು ಆಶ್ವಾಸನೆಯನ್ನು ಕೊಟ್ಟಿದ್ದ. ಎಲ್ಲರೂ ಬೆಳಗಾಗುವುದನ್ನೇ ಕಾಯುತ್ತಿದ್ದರು. ಒಬ್ಬರೂ ಮಾತಾಡದೆ ಮೌನವಾಗಿದ್ದಾಗ ಜಯ ತುಟಿಯುಲುಗಿಸಿದ. "ಅತ್ತಿಗೇ... ನೀರೂ..." ಎಂದು ಆ ಕ್ಷೀಣಧ್ವನಿ ತೊದಲು ನುಡಿಯಿತು.

ಲಲಿತ ಬಿಸಿನೀರು ತಂದುಕೊಟ್ಟಳು. ನೀರು ಕುಡಿದು, "ಪರೀಕ್ಷೆಗೆ ದುಡ್ಡು ಕಟ್ಟಬೇಕಣ್ಣಾ—ಕೂಲಿಕಾರ್ರು—ಅವರ್ನ ನೋಡ್ಕೊಬೇಕೂ..." ಎಂದ ಜಯ ನೀರಿನ ಲೋಟ ಕೆಳಗಿಡಲು ಯತ್ನಿಸುತ್ತಾ.

ಆ ಕೃಷ್ಣಪಕ್ಷದ ಕತ್ತಲು ಎಂದಿಗಿಂತಲೂ ಭೀಕರವಾಗಿತ್ತು. ನಾರಾಯಣ ಆಕಾಶವನ್ನೇ ದಿಟ್ಟಿಸುತ್ತ ಕುಳಿತ.

"ಅಣ್ಣಾ, ಕೂತ್ಕೊಬೇಕಣ್ಣಾ. ಮೈಗಂಟೆಲ್ಲಾ ನೋವಣ್ಣಾ" ಎಂದು ಜಯರಾಂ ನರಳಿದ. ನಾರಾಯಣ ಅವನನ್ನು ತನ್ನ ಎದೆಗೊರಗಿಸಿ ಕುಳ್ಳಿರಿಸಿ ಕೊಂಡುದಾಯಿತು. ಅವರು ನೋಡುತ್ತಿದ್ದಂತೆಯೇ ಜಯರಾಮನ ಉಸಿರು ತಡತಡೆದು ಬರತೊಡಗಿತು.

"ಅಣ್ಣಾ...ಉಸಿರು ಸಿಕ್ಕಿಕೊಂಡಹಾಗಾಗುತ್ತಲ್ಲಣ್ಣಾ..."

ನಾರಾಯಣನ ಕಣ್ಣಲ್ಲಿ ಹರಿಯದೆ ಉಳಿದಿದ್ದ ನೀರೆಲ್ಲ ಇಳಿದು ಬಂತು. ಮೆಲ್ಲನೆ ಕೈಯಿಂದ ಆತ ಜಯರಾಮನ ತಲೆ ಸವರಿದ.

"ಸಹಿಸಿಕೋಪ್ಪಾ, ಜಯಾ...ಇನ್ನೇನು ಬೆಳಗಾಯ್ತು. ಡಾಕ್ಟರ ಹತ್ತಿರ ಹೋಗೋಣ..." ದುಃಖ, ವಾತ್ಸಲ್ಯಗಳು ಮಿಶ್ರಿತವಾಗಿ ಆ ಮಾತುಗಳು ಹೊರಡುತ್ತಿದ್ದುವು.

"ಅಣ್ಣಾ, ಸಹಿಸೋಕಾಗೊಲ್ಲಪ್ಪಾ, ಏನೇನೋ ಆಗ್ತಿದೆ ಹೊಟ್ಟೇಲಿ."

ವಿಚಿತ್ರ ಯಾತನೆಯಾಗುತ್ತಿತ್ತು ಅವನಿಗೆ. ಪ್ರತಿ ನರವನ್ನೂ ಹಿಂಡಿದ ಹಾಗಾಗುತ್ತಿತ್ತು. ತನ್ನ ಶಕ್ತಿಯನ್ನೆಲ್ಲಾ ಯಾರೋ ಎಳೆದುಕೊಳ್ಳುತ್ತಿದ್ದಂತೆ ಭಾಸವಾಗುತ್ತಿತ್ತು.

ಬಹಳ ಕಷ್ಟದಿಂದ, "ತುಂಬಾ...ಸಂಕಟಾ...ಅಯ್ಯಪ್ಪಾ..." ಎಂದ. ದೀರ್ಘವಾದ ಉಸಿರು ಬಂತು. ಗಾಳಿ ಜೋರಾಗಿ ಬೀಸಿತು. ಉರಿಯುತ್ತಿದ್ದ

ದೀಪ ಆರುವ ಭೀತಿಯಿಂದ ಕುಣಿದಾಡಿತು.

"ಅಣ್ಣಾ...ಅಣ್ಣಾ..."

"ಏನು ಜಯಾ?"

"ಆಗಿಹೋಯ್ತು...ಬಂದೇ....ಬಿಡ್ತು.....ನೋಡು.....ರಂಗಸ್ವಾಮಿ...ಸ್ಕೂಲ್...ಕೂಲಿಗಾ...ರ್ರೂ...ಅಣ್ಣಾ..."

ಜಯರಾಮ ನೀಳವಾಗಿ ಉಸಿರುಬಿಟ್ಟ. ಉಬ್ಬಸ ಬಂತು. ನಾರಾಯಣನ ಎದೆ ಬಲವಾಗಿ ಹೊಡೆದುಕೊಂಡಿತು. ಕೈಗಳು ನಡುಗಹತ್ತಿದುವು. ಮೂರನೆಯ ಬಾರಿ ಅತಿ ನೀಳವಾದ ನಿಟ್ಟುಸಿರೊಂದು ಹೊರಬಿತ್ತು. ನಾರಾಯಣ ಕಣ್ಣೆವೆ ಹೊಡೆಯದೆ ನೋಡುತ್ತಿದ್ದ. ಜಯರಾಮನ ಕತ್ತು ತೂಗಿತು. ನಾರಾಯಣನಿಗೆ ಅರಿವಿಲ್ಲದಂತೆಯೇ, ಜಯನ ದೇಹ ಅವನೆದೆಯ ಮೇಲಿಂದ ಕೆಳಗುರುಳಿತು.

"ಜಯಾ" ಎಂದು ಚೀರಿದ ನಾರಾಯಣ. ಗೊಳೋ ಎಂದು ಲಲಿತ ಅತ್ತಳು.

* * *

ಮರುದಿನ...

ರಂಗಸ್ವಾಮಿ ಬೆಳಿಗ್ಗೆಯೇ ನೋಟ್ಸ್ ತೆಗೆದುಕೊಂಡು ಹೋಗಲು ಬಂದ. ಬಾಗಿಲು ಮುಚ್ಚಿತ್ತು. ಎರಡು ಬಾರಿ ತಟ್ಟಿದರೂ ಉತ್ತರವೇ ಇಲ್ಲ. ರಂಗಸ್ವಾಮಿ ಹೊರಗಿನಿಂದಲೇ ಕೂಗಿದ.

"ಜೈರಾಂ, ಬರೋಲ್ವೇನೋ ಸ್ಕೂಲಿಗೆ...ಬೇಗ ನೋಟ್ಸ್ ಕೊಡಪ್ಪಾ...ಹೊತ್ತಾಯ್ತು...."

ನಾರಾಯಣ ಅಳುತ್ತಲೇ ಬಾಗಿಲು ತೆರೆದ.

ರಂಗಸ್ವಾಮಿ ಗಾಬರಿಯಿಂದ, "ಏನ್ರೀ? ಏನಾಯ್ತು, ಜಯರಾಂ ಎಲ್ಲಿ?" ಎಂದು ಕೇಳಿದ. ನಾರಾಯಣ ಮುಖ ಮುಚ್ಚಿಕೊಂಡು ಅಳುತ್ತಾ, ಕೈಮಾಡಿ ತೋರಿಸಿದ.

ಗೆಳೆಯ ಅಲ್ಲಿ ಕೊನೆಯ ನಿದ್ದೆಯಲ್ಲಿ ಮಲಗಿದ್ದ. ರಂಗಸ್ವಾಮಿಗೆ ಹೃದಯ ಕಿತ್ತು ಬಂದಂತಾಯಿತು. ಶವದ ಮೇಲೆ ಬಿದ್ದು ಅಳತೊಡಗಿದ. ಅಕ್ಕಪಕ್ಕದ ಮನೆಯವರೆಲ್ಲಾ ಬಂದರು. ವಿಷಯ ತಿಳಿದು ಕಣ್ಣಲ್ಲಿ ನೀರು ಹಾಕಿಕೊಂಡರು.

ರಂಗಸ್ವಾಮಿ ಚೇತರಿಸಿಕೊಂಡು ಸೈಕಲ್ ಏರಿ ಸ್ಕೂಲಿಗೆ ಧಾವಿಸಿದ. ಮುಖ್ಯೋಪಾಧ್ಯಾಯರ ಕೊಠಡಿಯ ಬಾಗಿಲ ಬಳಿ ನಿಂತಿದ್ದ ಜವಾನ ತಡೆಯುತ್ತಿದ್ದರೂ ಕೇಳದೆ ಒಳಗೆ ನುಗ್ಗಿದ.

"ಸಾರ್! ಜಯರಾಂ ತೀರಿಹೋದ ಸಾರ್! ಜಯರಾಂ!" ಸ್ವರ ಕಂಪಿಸಿ ಆ ಕಣ್ಣುಗಳಲ್ಲಿ ನೀರು ಸುರಿಯಿತು.

"ಆಂ..." ಎಂದು ಅಚ್ಚರಿಯಿಂದ ಅವರು ಬಾಯಿ ತೆರೆದರು.

ಆ ಕ್ಷಣವೇ ಜಯರಾಮನ ಮರಣ ವಾರ್ತೆ ಸ್ಕೂಲಿನಲ್ಲೆಲ್ಲಾ ಹಬ್ಬಿತು.

"ನಮ್ಮ ಜಯರಾಂ ತೀರಿಹೋದ್ನೆ—ನಮ್ಮ ಜಯರಾಂ—" ಎಂದೆಲ್ಲರೂ ಕೇಳುವವರೇ!

ಮುಖ್ಯೋಪಾಧ್ಯಾಯರ ವಿಚಾರಶಕ್ತಿಯೇ ಕುಂಠಿತವಾಯಿತು. ಮೇಲೆದ್ದು ಸ್ಕೂಲಿನಿಂದ ಹೊರಹೊರಟರು. ಎಲ್ಲಿಗೆ ಹೋಗಬೇಕೆಂದು ಅವರಿಗೇ ಗೊತ್ತಿರಲಿಲ್ಲ. ಆದರೆ ಕಾಲುಗಳು ತಾವಾಗಿಯೇ ಜಯರಾಮನ ಮನೆ ಕಡೆಗೆ ತಿರುಗಿದ್ದುವು.

ಸ್ಕೂಲಿನಿಂದ ರಂಗಸ್ವಾಮಿ ಕಾರ್ಮಿಕರ ಕೇರಿಗೆ ಓಡಿದ. ಕಂಡವರಿಗೆಲ್ಲ ಹೇಳಿದ. ಮಗುವಿಗೆ ಹಾಲು ಕುಡಿಸುತ್ತಾ ಕುಳಿತಿದ್ದ ಕೂಲಿಕಾರ ಹೆಂಗಸೊಬ್ಬಳು ವಿಷಯ ತಿಳಿಯುತ್ತಲೇ ಮಗುವನ್ನು ಕಂಕುಳಲ್ಲೇ ಇರಿಸಿಕೊಂಡು ಓಡಿದಳು. ಅವಳ ಹಿಂದೆ ಹಲವರು ಒಬ್ಬೊಬ್ಬರಾಗಿ ಅಲ್ಲಿಗೆ ಧಾವಿಸಿದರು.

ನಾರಾಯಣನ ಪುಟ್ಟ ಮನೆ ಜನರಿಂದ ಕಿಕ್ಕಿರಿದು ತುಂಬಿಹೋಗಿತ್ತು. ಒಬ್ಬೊಬ್ಬರೇ ಒಳಗೆ ಬಂದು ಜಯರಾಮನನ್ನು ಕಡೆಯಬಾರಿ ನೋಡಿ ಕಣ್ಣಲ್ಲಿ ನೀರು ಹಾಕಿಕೊಂಡು ಹೋಗುತ್ತಿದ್ದರು. ಜಯರಾಂನ ಗೆಳೆಯರು ತಮ್ಮೆಲ್ಲರ ಜೀವನಾಡಿಯಾಗಿದ್ದ ಪ್ರೀತಿಯ ಒಡನಾಡಿಯ ಮರಣ ಕಂಡು ಗುಂಡಿಗೆಯೊಡೆಯುವಂತೆ ಅಳುತ್ತಿದ್ದರು . . .

ತನ್ನ ಮಗುವನ್ನು ಜಯರಾಮನ ಪಾದಕ್ಕೆ ಮುಟ್ಟಿಸಿ ನಮಸ್ಕಾರಮಾಡಿಸುತ್ತಿದ್ದ ಬಡವಳೊಬ್ಬಳು, "ನಮ್ಮನ್ನು ಬಿಟ್ಟು ಹೋದ್ಯಾ...ತಿರ್ಗ ಭಿಕಾರಿಗಳಾದೆವಲ್ಲೋ" ಎಂದು ಧ್ವನಿ ತೆಗೆದು ಅಳತೊಡಗಿದಳು. ಮತ್ತೆ ಹತ್ತು ಕಂಠಗಳಿಂದ ರೋದನ ಹೊರಟಿತು.

ಇಷ್ಟೆಲ್ಲಾ ನಡೆದಿದ್ದಾಗಲೇ ಮುಖ್ಯೋಪಾಧ್ಯಾಯರು ಬಂದರು. ಮುಗು

ಳ್ನಗುತ್ತಾ ಪ್ರಶಾಂತವಾಗಿ ನಿದ್ರೆ ಮಾಡುತ್ತಿದ್ದ ಜಯರಾಮನ ಮುಖ ನೋಡುವ ಹೊತ್ತಿಗೆ, ಅವರಿಗೆ ಸಾಕುಸಾಕಾಗಿಹೋಯಿತು. ನಾರಾಯಣ ತಮಗಿಂತ ಬಡವ, ಕಾರಖಾನೆಯ ಗುಮಾಸ್ತೆ ಎಂಬುದನ್ನು ಮರೆತು, ಅವನ ಕೈ ಹಿಡಿದು ಬಿಕ್ಕಿ ಬಿಕ್ಕಿ ಅತ್ತರು.

ಆದರೆ, ತನ್ನ ಪ್ರೇಮದಿಂದ ಅವರೆಲ್ಲರಿಗೂ ಆತ್ಮೀಯನಾಗಿದ್ದ ಕಣ್ಮಣಿ ಜಯರಾಂ ಮಾತ್ರ ಎಲ್ಲರನ್ನೂ ನೋಡಿ ನಗುತ್ತಾ ಚಿರಶಾಂತಿಯಲ್ಲಿ ಪವಡಿಸಿದ್ದ.

ಏಪ್ರಿಲ್, ೧೯೫೦

# ಮೂಲಾ ನಕ್ಷತ್ರದ ಹುಡುಗಿ

ಅಮ್ಮ ಕರೆದ ಧ್ವನಿ ಕೇಳಿ ತೊಳೆಯುತ್ತಿದ್ದ ಪಾತ್ರೆಗಳನ್ನಲ್ಲೇ ಹಾಕಿ ಪದ್ದಿ ಎದ್ದು ಬಂದಳು. ಬಾಗಿಲಲ್ಲಿ ಕುಳಿತಿದ್ದ ಜೋಗಯ್ಯನನ್ನು ಕಂಡೊಡನೆ ತಾಯಿ ಕರೆದುದರ ಅರ್ಥ ಅವಳಿಗಾಯಿತು. ಮತ್ತೆ ಅದರ ಪುನರಾವರ್ತನೆ.

"ಬೆಳಿಗ್ಗೆ ಎದ್ದೊಡನೆ ಈ ಗೂಬೆ ಎಲ್ಲಿ ಕಾದಿದ್ದನೋ...ಸುಮ್ಮನೆ ಹೆತ್ತ ಹೊಟ್ಟೆ ಉರಿಸೋದಕ್ಕೆ—ನನ್ನ ಕೈ ನೋಡಿ ಅವಲಕ್ಷಣ ಎಂತ ಹೇಳೋದಕ್ಕೆ" ಎಂದು ಪದ್ದಿ ಗೊಣಗಿಕೊಂಡಳು.

ಪದ್ದಿಯ ತಾಯಿ ಅಲ್ಲೇ ಕುಳಿತಿದ್ದಳು.

"ನೋಡಪ್ಪಾ...ಇವಳ ಕೈ ಸ್ವಲ್ಪ ನೋಡಿ ಹೇಳು! ಇಲ್ಬಾರೇ, ಕೈತೊಳೆದು ಕೊಂಡುಬಂದೀ ತಾನೆ...? ಕೈ ನೋಡ್ತಾನಂತೆ...ಸ್ವಲ್ಪ ತೋರಿಸ್ಬಾರ್ದೇನು?" ಎಂದು ಅವಳು ಹೇಳಿದಳು. ಪದ್ದಿಯ ಮುಖ ಹುಳಿ ಹಿಂಡಿದ ಹಾಗಾಯಿತು. ಜೋಗಯ್ಯನನ್ನು ಮಿಕಿಮಿಕಿ ನೋಡುತ್ತಾ, ಒದ್ದೆಯಾಗಿದ್ದ ಕೈಯನ್ನು ಉಟ್ಟಿದ್ದ ಸೀರೆಗೆ ಒರೆಸತೊಡಗಿದಳು.

"ಬಾಮ್ಮಾ ತಾಯಿ...ಎಡಗೈ ಕೊಡೀಮ್ಮಾ" ಎಂದು ಜೋಗಯ್ಯ ಮುಂದೆ ಸರಿದು ಬಂದು ಪದ್ದಿಯೆಡೆಗೆ ಕೈ ನೀಡಿದ.

ಪದ್ದಿ ಯಂತ್ರದಂತೆ ಅವನೆದುರು ಹೋಗಿ ಕುಳಿತಳು. ಜೋಗಯ್ಯ ಅವಳ ಮೃದು ಹಸ್ತ ತೆಗೆದುಕೊಂಡು ಒಂದೊಂದಾಗಿ ರೇಖೆಗಳನ್ನು ನೋಡತೊಡಗಿದ. ಕ್ಷಣಕ್ಷಣಕ್ಕೂ ಅವಳ ಮುಖದ ಭಾವ ಬದಲಾಗುತ್ತಿತ್ತು. ಪದ್ದಿ ಮತ್ತು ಅವಳ ತಾಯಿ—ಇಬ್ಬರೂ ಅವನ ಬಾಯಿಂದ ಬರುವ ಉತ್ತರಕ್ಕಾಗಿ ಕಾದು ಕುಳಿತಿದ್ದರು.

"ತುಂಬಾ ಕಷ್ಟದಲ್ಲಿದ್ದೀರಿ ತಾಯಿ...ಎಲ್ಲಾ ಒಳ್ಳೆದಾಗೂ ಲಕ್ಷಣ ಉಂಟು. ಕಾಳೀದೇವಿ ಮಹಿಮೇ ಮುಖ್ಯ...ದೇವರ ನಾಮಾ ನೆನೆಯೋ ಮನೆ..."

ಆ ಮಾತಿನ ಅರ್ಥವಾಗದೆ ಪದ್ದಿಯ ತಾಯಿ ಆತುರದಿಂದ, "ಏನಪ್ಪಾ...? ಇವಳಿಗೆ ಮದುವೆ ಆಗುತ್ತೇನು...? ಸ್ವಲ್ಪ ಸರಿಯಾಗಿ ನೋಡಪ್ಪಾ..." ಎಂದು ಪುಸಲಾಯಿಸಿದಳು.

ಅವರಿದ್ದ ಪರಿಸ್ಥಿತಿ ತಾನಾಗಿಯೇ ಜೋಗಿಗೆ ತಿಳಿಯಿತು...ಒಟ್ಟಿನಲ್ಲಿ ಹುಡುಗಿಗೆ ಇನ್ನೂ ಮದುವೆಯಿಲ್ಲ...ಏನೋ ಕಾರಣದಿಂದ ತಡೆಯಾಗಿದೆ...ಎಂದು. ಪದ್ದಿಯ ತಾಯಿಯ ಮುಖದ ಹಿಂದಿದ್ದ ನೋವಿನ ನೆರಳನ್ನು ಗಮನಿಸಿ ಅತ್ತ, ಕೈ ತಿರುಗಿಸಿ ತಿರುಗಿಸಿ ನೋಡಿ, ಹೇಳಿದ :

“ಭಯಬೀಳಬೇಡೀ ತಾಯೀ ..ಎಲ್ಲಾ ಒಳ್ಳೆದಾಗ್ತದೆ...ಗುರೂನ ಕೃಪೆ ಒದಗಿಬರೋ ಲಕ್ಷಣ ಉಂಟು...ಅಮ್ಮಾವ್ರು ದೊಡ್ಡ ಮನೆಗೆ ಹೋಗ್ತಾರೆ ತಾಯೀ · ಭಾರಿ ಮನುಷ್ಯರ ಮನೆಗೆ. ಶುಭವಾಗ್ತದೆ. ಶುಭವಾಗ್ತದೆ... ಗುರೂನ ದಯೆಯಿಂದಾ...ದೇವರ ನಾಮಾ ನೆನೆಯೋ ಮನೆ...”

ಅದೇ ಸಮಯಕ್ಕೆ ಸರಿಯಾಗಿ ಪದ್ದಿಯ ತಂದೆ ಒಳಗಿನಿಂದ ಮಂಗಳಾರತಿ ಮಾಡಲು ಗಣಗಣ ಎಂದು ಗಂಟೆ ಬಾರಿಸಿದರು. ಅದು ಶುಭ ಸೂಚನೆಯೆಂದು ಪದ್ದಿಯ ತಾಯಿಯ ಹೃದಯ ಆನಂದದಿಂದ ಉಬ್ಬಿಹೋಯಿತು. ಆ ಸಂಭ್ರಮದಲ್ಲಿಯೇ, “ಲೇ ಪದ್ದೀ...ಜೋಗಯ್ಯನಿಗೆ ಒಂದು ಪಾವಲಿ ದಕ್ಷಿಣೆ ತಂದುಕೊಡೇ” ಎಂದು ಕಟ್ಟಪ್ಪಣೆ ವಿಧಿಸಿದಳು.

ಪದ್ದಿ ಎದ್ದುಹೋದದ್ದು ನೋಡಿ ಅವಳು ಹೋದ ಕಡೆಗೇ ನೋಡುತ್ತಾ, “ಸಧ್ಯ...ಅಂತೂ...ಎದೆ ಮೇಲಿನ ಭಾರ ಇಳಿಯುತ್ತೆ ಇನ್ನು...” ಎಂದುಕೊಂಡು ನಿಟ್ಟುಸಿರಿಟ್ಟಳು.

—ಆಕೆಗೂ ಸಾಕಾಗಿಹೋಗಿತ್ತು. ಒಂದಲ್ಲ, ಎರಡಲ್ಲ, ಇಡೀ ಮೂರು ವರುಷದಿಂದ ಎಲ್ಲರ ಬೈಗಳು, ನಿಂದೆ, ಅಪಹಾಸ್ಯ ಸಹಿಸುತ್ತಾ ಬಂದಿದ್ದಾಳೆ ಆಕೆ. ಪದ್ದಿ ಬೇಗ ಬೆಳೆದು ನಿಂತುದು ಅವರ ತಪ್ಪೆ ? ಅವಳಿಗೆ ಮದುವೆ ಆಗದಿದ್ದದ್ದು ಅವರ ತಪ್ಪೆ...? ಆದರೂ ಸಮಾಜ ನಿಂದಿಸುವುದು ಅವರನ್ನೇ...! ನೀರಿಗೆ ಹೋದಾಗ, “ಏನ್ರೀ ನಿಮ್ಮ ಮಗಳಿಗೆ ಮದುವೆ ಮಾಡೊಲ್ಲ ಅಂದುಕೊಂಡಿದೀರೋ ?” ಎಂತ ನೆರೆಮನೆಯಾಕೆ ಕೇಳಿದರೆ ತಾಯಿ ಉತ್ತರ ಕೊಡುವ ಮೊದಲೇ “ನೆರೆದು ಮೂರು ವರುಷಕ್ಕೆ ಬಂತು. ಇನ್ನೂ ತೌರಿನಲ್ಲಿ ಕೂರಿಸಿಕೊಂಡಿರೋದೂ ಅಂದರೆ...! ತುಂಬಾ ಚೆನ್ನಾಗಿದೆ” ಎಂದು ತೀಕ್ಷ್ಣವಾಗಿ ಇನ್ನೊಬ್ಬಳೆನ್ನುತ್ತಿದ್ದಳು.

ಅವಳನ್ನು ವಿಚಾರಿಸಿ ಇನ್ನೊಬ್ಬಾಕೆ ಗಡಸು ಧ್ವನಿಯಲ್ಲಿ “ಪದ್ದೀದು. ಮೂಲಾ ನಕ್ಷತ್ರ ಅಂತೇರೀ...ಮೂಲಾ ನಕ್ಷತ್ರಾ...” ಎಂದು ಚುಚ್ಚಿಚುಚ್ಚಿ

ಹೇಳಿ ಹುಸಿನಗೆ ನಗುತ್ತಿದ್ದಳು. ಅದನ್ನು ತಾಯಿಯಾದವಳು ಹೇಗೆ ಸಹಿಸಬೇಕು ?

ಅವಳಿಗೂ ಮಗಳು ಎಂಬ ಅಭಿಮಾನ ಇಲ್ಲವೆ? ಪದ್ದಿಯನ್ನು ಕಂಡರೆ ಅವಳಿಗೆ ಪ್ರೀತಿ ಇಲ್ಲವೆ...? ಇಂದಲ್ಲ ನಾಳೆ ಮದುವೆ ಮಾಡಲೇಬೇಕು-ಆಗಲೇಬೇಕು! ಅದನ್ನು ಕಟ್ಟಿಕೊಂಡು ಇವರಿಗೇನು...?

ಒಮ್ಮೆ ತಡೆಯಲಾರದೆ ತಾಯಿ ಕೇಳಿಯೇಬಿಟ್ಟಳು.

"ಪದ್ದಿ ವಿಷಯ ನೀವು ಸಿಕ್ಕಹಾಗೆ ಮಾತಾಡಬೇಡ್ರಿ; ಇವತ್ತಲ್ಲ ನಾಳೆ ಮದುವೆ ಆಗುತ್ತೆ...ಏನವಸರ ?"

"ಓ...ಅವಸರ ಏನೂ ಇಲ್ಲ...ನಿಧಾನವಾಗೇ ಮಾಡಿ. ಮಾಡದಿದ್ರೂ ಚಿಂತಿಲ್ಲ. ಇಷ್ಟಕ್ಕೂ ನಮಗೇನ್ರಿ ?" ಎಂದು ಹೇಳಿ ನೆರೆಮನೆಯಾಕೆ ಮುಖ ಸಿಂಡರಿಸಿಕೊಂಡು ಹೋಗಿದ್ದಳು.

ಮಾಡದಿದ್ದರೂ ಚಿಂತಿಲ್ಲ...ಅದು ಹೇಗೆ? ಮಾಡಿಯೇ ಮಾಡಬೇಕು. ಆದರೆ ಮೂಲಾ ನಕ್ಷತ್ರದ ಹುಡುಗಿಯ ಕೈ ಹಿಡಿಯಲು ತಾವಾಗಿ ಮುಂದೆ ಬರುವವರು ಯಾರಿದ್ದಾರೆ...? ಅವರನ್ನೆಲ್ಲ ಹಿಂದೆ ಎಳೆಯುವ ಶಕ್ತಿ ಯಾವುದು ? ಎಂದು ತಾಯಿ ಚಿಂತಿಸುತ್ತಿದ್ದಳು.

ಪದ್ದಿ ! ಈ ಹಾಳು ಪದ್ದಿಯಿಂದಲೇ ಇಷ್ಟೆಲ್ಲಾ ಕಷ್ಟ, ನಿಂದೆ. ಅವಳು ಮೂಲಾ ನಕ್ಷತ್ರದಲ್ಲಿ ಹುಟ್ಟಿದ್ದೇ ಬಂತು ಎಲ್ಲಕ್ಕೂ ಮೂಲ. ಅವಳು ಮೂಲಾ ನಕ್ಷತ್ರದಲ್ಲೇಕೆ ಹುಟ್ಟಬೇಕಾಗಿತ್ತು ? ಅದರಿಂದ ಹೆತ್ತವರ ಹೊಟ್ಟೆ ಏಕೆ ಉರಿಸಬೇಕಾಗಿತ್ತು ? ಅದು ಪದ್ದಿಯ ತಪ್ಪೆ ? ಅಲ್ಲ...ಅಲ್ಲ...ಅದು ತಾಯಿಗೂ ಗೊತ್ತು. ಆದರೆ ಮನಸ್ಸಿಗೆ ಸಮಾಧಾನ...? ಮಗಳ ಬಗ್ಗೆ ಅಂತಹ ಯೋಜನೆಯವರೆಗೂ ಬಂದಿತ್ತು ತಾಯಿ ಹೃದಯ.

ಪದ್ದಿ ಹದಿನೆಂಟು ದಾಟಿ ಹತ್ತೊಂಬತ್ತಕ್ಕೆ ಕಾಲಿಟ್ಟಿದ್ದಾಳೆ. ತುಂಬು ಯೌವನದ ದೇಹ. ಅವಳ ಸುಂದರ ಶರೀರವನ್ನು ಮುಚ್ಚಲಾರದ ಹರಕು ಅರಿವೆ...

ನೆನಪು ಅಲೆಅಲೆಯಾಗಿ ಬಂದು, ಪದ್ದಿಯನ್ನು ನೋಡುತ್ತಿದ್ದಂತೆ ಶಾಂತ ಮನಸ್ಸಿನ ಭಾವ ಮರೆಯಾಗಿ, ಇದ್ದಕ್ಕಿದ್ದಂತೆ ರೋಷ ಉಕ್ಕಿ ಬಂತು ತಾಯಿಗೆ. ಹಿಡಿ ಶಾಪ ಹಾಕಿದಳು, ಅವಳು ತನ್ನ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೆ!

ಹೊಟ್ಟೆಯಲ್ಲಿ ಹುಟ್ಟಿದ ಮಗಳೇ ಸರಿ! ಆದರೆ ಸನ್ನಿವೇಶ, ವಾತಾವರಣ ಅಂಥದು ಅಂಥ ಪರಿಸ್ಥಿತಿಯಲ್ಲಿ ಅಂಥ ಭಾವನೆ ಬರದಿರುವುದಾದರೂ ಹೇಗೆ?

ಮಗ ಕಿಟ್ಟಿ ಓಡಿಬಂದ...ತಾಯಿ ಅವನನ್ನಪ್ಪಿ ಕಣ್ಣೀರಿಟ್ಟಳು. ಅವನೊಬ್ಬನೇ ಅವಳ ಕಣ್ಣನಿಧಿ. ಅವನೇ ಅವಳ ಬಾಳಿನ ಸ್ವರ್ಣಗೋಪುರ. ಅವಳ ಬಾಳುವೆ, ಇರುವಿಕೆ ಎಲ್ಲಾ ಅವನ ಏಳಿಗೆಗೆ ಮೀಸಲು–ಗಂಡುಮಗ ತಾಯಿಯ ಪುತ್ಥಳಿ; ಹೆಣ್ಣುಮಗಳು ತಾಯಿಯ ಎಲ್ಲ ಶೋಕಗಳಿಗೆ ಮೂಲಾಧಾರ. ಕಿಟ್ಟುವಿಗೆ ಒಳಿತಾಗಲಿ, ಆತ ಬೇಗ ಮುಂದೆ ಬರಲಿ, ಎಂಬಾಸೆ. ಆದರೆ ಪದ್ದಿ? ಒಮ್ಮೆ ಬೇರೆ ಮನೆಗೆ ಹೋಗಿಬಿಟ್ಟರೆ ಸರಿ. ಎಂಥದೋ ಒಂದು—ಬೇರೆ ಮನೆ ಗುಡಿಸಲಾಗಲೀ, ಅರಮನೆಯಾಗಲೀ—ಯಾವುದಾದರೂ ಸರಿ...ಆಕೆಯೊಮ್ಮೆ ಹೋದರೆ ಸಾಕು!—ತಾಯಿಗೆ ತಿಳಿಯದೆಯೇ ಆ ಇಬ್ಬರು ಮಕ್ಕಳ ಕುರಿತಾದ ವರ್ತನೆಯಲ್ಲಿ ಆ ಅಂತರ ಬೆಳೆದು ಬಂದಿತ್ತು.

ಪದ್ದಿಯನ್ನು ನೋಡಲು ಬಂದವರೆಲ್ಲಾ ತಿರುಗಿ ಹೋಗಿದ್ದರು. ಪ್ರತಿಯೊಂದು ಸಾರಿ ನೋಡಲು ಬಂದಾಗಲೂ ಪಕ್ಕದ ಮನೆಯಿಂದ ಪೌಡರು ತಂದು ಪದ್ದಿಯ ಮುಖಕ್ಕೆ ಹಚ್ಚಬೇಕಾಗಿತ್ತು. ಸಾಧಾರಣ ಕಪ್ಪನ್ನು ತೊಡೆದು, ಮುಖವನ್ನು ಬಿಳಿಯದನ್ನಾಗಿ ಮಾಡುವುದಕ್ಕೆ! ದುಂಬಿಗಳನ್ನು ಹೂವಿನ ಬಳಿ ಎಳೆಯುವ ಒಂದು ಸಾಧನ ಅದು. ಪೌಡರು ಕೊಟ್ಟು, ಕೊಟ್ಟು, ನೆರೆಮನೆಯಾಕೆಗೂ ಬೇಸರ ಬಂದಿತ್ತು.

"ಇವರ ಪದ್ದೀ ಮದುವೆಗೇ, ನನ್ನ ಮಗೂ ಪೌಡರೆಲ್ಲಾ ಮುಗಿದು ಹೋಯ್ತು" ಎಂದಾಕೆ ಒಂದೆರಡು ಬಾರಿ ಗೊಣಗಿದ್ದು ತಾಯಿಯ ಕಿವಿಗೂ ಬಿದ್ದಿತ್ತು.

* * *

ಪ್ರತಿಸಾರಿ ನಡೆದ ಹಾಗೆಯೇ ಈ ಸಾರಿಯೂ ಸಿದ್ಧತೆ ನಡೆಯಿತು. ತಾಯಿಯ ಮನದಲ್ಲಿ ಜೋಗಿಯ ಆಶ್ವಾಸನೆ ಹೊಸ ಆಸೆ ಹುಟ್ಟಿಸಿತ್ತು. ಎಂದಿಗಿಂತ ಹೆಚ್ಚು ಆಸಕ್ತಿಯಿಂದ ಪದ್ದಿಯನ್ನು ಶೃಂಗರಿಸಿದ್ದಾಯಿತು. ತನ್ನ ಮದುವೆಯಲ್ಲಿ ಗುಮಾಸ್ತೆ ಪತಿ ಕೊಟ್ಟ ಸೀರೆ ಒಂದೆರಡು ಕಡೆ ಹರಿದಿದ್ದರೂ ಜೋಪಾನವಾಗಿ ಉಳಿಸಿಕೊಂಡು ಬಂದದ್ದು...ಅದನ್ನು ನಯವಾಗಿ ಉಡಿ

ಸಿದ್ದಾಯಿತು. ತೆಳುವಾಗಿ ಪೌಡರು ಹಚ್ಚಿದುದಾಯಿತು. ಇದ್ದುದರಲ್ಲೇ ನಾಲ್ಕಾರು ಕಡೆಯಿಂದ ಸಾಲ ತಂದು ತಿಂಡಿ ಮಾಡಿದ್ದಾಯಿತು.

"ಇವಳಿಗಾಗಿ ಇನ್ನೆಷ್ಟು ಸಾಲವೋ ಏನೋ" ಎಂದು ತಾಯಿತಂದೆಯರ ಮನ ನುಡಿಯದೆ ಹೋಗಲಿಲ್ಲ.

ಶಿವನಂಜಯ್ಯನವರ ಎರಡನೇ ಮಗ ಎಸ್.ಎಸ್.ಎಲ್.ಸಿ. ವರೆಗೂ ಓದಿ ಕೊಂಡಿದ್ದನಂತೆ. ಎಷ್ಟು ನಿಜವೋ ಎಷ್ಟು ಸುಳ್ಳೋ, ಆದರೂ ಡ್ರೆಸ್ಸಿನಲ್ಲಿ, ಶ್ರೀಮಂತ ಕಾಲೇಜ್ ಹುಡುಗರ ಹಾಗಿದ್ದ. ಪದ್ದಿಯನ್ನು ನೋಡುತ್ತಲೇ ಆ ರಸಿಕ, ಮುಖ ತಿರುಗಿಸಿಕೊಂಡ. ಕಾಫಿ ಎಲ್ಲರ ಮುಂದಿಟ್ಟಾಗ ಪದ್ದಿ ಮೆಲ್ಲನೆ ತಲೆಯೆತ್ತಿ ಅವನ ಮುಖ ನೋಡಿದಳು. ಗಂಡಿನ ಹುಳಿಮುಖ ಅವಳಿಗೆ ಉತ್ತರ ಹೇಳಿತು.

"ಎಲ್ಲಾ ಕೆಲಸ ನಾಜೋಕಾಗಿ ಮಾಡ್ತಾಳೆ...ಶಾಸ್ತ್ರೋಕ್ತವಾಗಿ ಸಂಗೀತ ಆಗಿದೆ..." ಎಂದು ಪದ್ದಿಯ ತಂದೆ, ಶಿವನಂಜಯ್ಯನವರಿಗೆ ನಿವೇದಿಸಿದರು.

ಶಿವನಂಜಯ್ಯ ತಲೆಯಾಡಿಸಿ "ಜಾತಕಾ ಗೀತಕ ? ವರಸಾಮ್ಯ ನೋಡೋಣವೇನು ?" ಎಂದು ಕೇಳಿಯೇಬಿಟ್ಟರು.

ಜಾತಕದ ವಿಷಯ ಬಂದೊಡನೆ ಪದ್ದಿಯ ತಂದೆ ಹೌಹಾರಿಹೋದರು.

"ಈಗಿನ ಕಾಲದಲ್ಲಿ ಅದೆಲ್ಲಾ ಯಾರು ನೋಡ್ತಾರೆ ಸ್ವಾಮಿ ? ಮುಖ್ಯ ಹೆಣ್ಣೂ ಗಂಡೂ ಪರಸ್ಪರಾ...." ಎಂದು ಹೆದರಿ ಬೆದರುತ್ತಲೇ ಮಾತು ಹಾರಿ ಸಿದರೂ ಸಾಗಲಿಲ್ಲ. ಶಿವನಂಜಯ್ಯ ಜಾತಕ ನೋಡಿಯೇ ನೋಡಿದರು. "ಮೂಲಾ ನಕ್ಷತ್ರದ ಹುಡುಗಿ!" ಎಂದು ಮೂಗು ಮುರಿದು ಹೋಗಿಬಿಟ್ಟರು.

ಪ್ರತಿಸಲವೂ ಇದೇ ನಾಟಕ ; ಈ ಬಾರಿ ಪದ್ದಿಯ ತಾಯಿಗೆ ತುಂಬಾ ಸಿಟ್ಟು ಬಂತು. ಅದನ್ನು ಯಾರ ಮೇಲೂ ತೋರಿಸಿಕೊಳ್ಳಲು ಅವಕಾಶ ಸಿಗದೇ ಹತ್ತಿರವಿದ್ದ ಪದ್ದಿಯ ಮೇಲೆಯೇ ಪ್ರಯೋಗಿಸಿದರು.

"ಎಲ್ಲೋ ನನ್ನ ಪಾಲಿನ ಪ್ರಾರಬ್ಧ ನೀನು...ಇನ್ನೂ ಸ್ವಲ್ಪ ಬೆಳ್ಳಗೆ ತೆಳ್ಳಗೆ ಲಕ್ಷಣವಾಗಿ ಹುಟ್ಟೋಕೇನಾಗಿತ್ತು ನಿಂಗೆ" ಎಂದು ಮೂದಲಿಸಿದರು.

ಅದಕ್ಕೇನುತ್ತರ ಹೇಳಬೇಕು ? ಚೆನ್ನಾಗಿ ಹುಟ್ಟದಿದ್ದುದು ಪದ್ದಿಯ ತಪ್ಪೆ ? ಯಾರ ತಪ್ಪು ?

ಅಂದು ಪದ್ದಿ ಊಟಮಾಡಲಿಲ್ಲ. ತಲೆನೋವಿನ ನೆಪ ಹಾಕಿ ಹಾಸಿಗೆಯಲ್ಲಿ

ಮುದುರಿಕೊಂಡಳು. ತಾಯಿ ಅವಳನ್ನು ಊಟಮಾಡೆಂದು ಬಲವಂತ ಮಾಡ ಲಿಲ್ಲ.

ಅದೇ ತಾನೆ ಆಟ ಮುಗಿಸಿಕೊಂಡು ಕಿಟ್ಟಿ ಒಳಗೆ ಬಂದಾಗ ''ಊಟಕ್ಕೇಳೋ ಕಿಟ್ಟೀ'' ಎಂದು ಮಧುರಸ್ವರದಿಂದ ತಾಯಿ ತಮ್ಮನನ್ನು ಕರೆಯು ತ್ತಿದ್ದುದು ಪದ್ದಿಗೆ ಕೇಳಿಸಿತು. ಒಂದು ಕ್ಷಣ ಪದ್ದಿ ಯೋಚಿಸಿದಳು :

''ಕಿಟ್ಟಿ ಬೇಕು, ನಾನು ಬೇಡ. ಯಾಕೆ ಹೀಗೆ ? ನಾನು ಮಾಡಿದ ತಪ್ಪು ತಾನೆ ಏನು ?''

ಅವಳ ಕಣ್ಣು ನೀರಿನಿಂದ ತುಂಬಿ ಬಂತು.

''ಹೆಣ್ಣುಬಾಳು ಕಣ್ಣೀರು....'' ಎಂದು ಕೆಳಗುರುಳಿದ ಕಣ್ಣೀರು ಅವಳಿಗೆ ಉತ್ತರ ಹೇಳಿತು.

ತಾಯಿ ತನ್ನನ್ನೇಕೆ ಮಾತುಮಾತಿಗೂ ಬಯ್ಯುತ್ತಾಳೆ ? ಅದು ಬಿಡಿಸ ಲಾರದ ಒಗಟು ಅವಳಿಗೆ. ತಾಯಿ ನಿಂದಿಸಿದಾಗ ಅವಳ ಮನಸ್ಸಿಗೆ ತುಂಬಾ ನೋವಾಗುತ್ತಿತ್ತು, ಅಳುತ್ತಿದ್ದಳು. ಆದರೆ ಅವಳೆಲ್ಲ ಪ್ರಶ್ನೆಗಳಿಗೆ ಉತ್ತರ ಸಿಗುತ್ತಿರಲಿಲ್ಲ. ಅಳುವಿನ ಜೊತೆಗೆ ಕೋಪವೂ ಬರುತ್ತಿತ್ತು.

'ತನ್ನನ್ನೇಕೆ ಬಯ್ಯಬೇಕು ? ಅವಳಿಗೇನು ಹಕ್ಕು?' ಎಂಬ ಯೋಚನೆ ಕಾಡುತ್ತಿತ್ತು.

ಕಳೆದ ಸಾರಿ ಗಂಡಿನವರು ಬಂದು 'ಒಲ್ಲೆ'ವೆಂದು ಹೇಳಿ ಹೋದಮೇಲೆ, ಬೈಗಳು ಇಮ್ಮಡಿಯಾದುವು. ಜೋಗಿಯ ಮಾತೂ ನಿಜವಾಗಲಿಲ್ಲವಲ್ಲಾ ಎಂದು ತಾಯಿಗೆ ಮಗಳ ಮೇಲೆ ರೋಷ ಉಕ್ಕಿ ಬಂತು.

ಹೊರಗೆ ಕಾಲಿಟ್ಟರೆಂದರೆ ಸುತ್ತಲಿನ ಮುಖಗಳು ಪದ್ದಿಯನ್ನು ನೋಡಿ ನಗುತ್ತಿದ್ದುವು. ಎಲ್ಲರನ್ನೂ ಅಪ್ಪಳಿಸಿಬಿಡೋಣ ಎನ್ನುವಷ್ಟು ಕೋಪ ಬರು ತ್ತಿತ್ತು ಅವಳಿಗೆ. ಮನೆಯೊಳಗೆ ಬಂದರೆ ಅದೇ ರುದ್ರಮೂರ್ತಿ ತಾಯಿ. ತಾಯಿಯ ಮಮತೆಯ ಹೃದಯಕ್ಕೆ ಇಂತಹ ಕಿಚ್ಚನ್ನಿಟ್ಟವರು ಯಾರು ?

ಆ ರಾತ್ರಿ ಯಾರೋ ಅಳುವ ಸದ್ದು ಕೇಳಿ ಪದ್ದಿಗೆ ಎಚ್ಚರವಾಯಿತು. ಹೊರಳಿ ನೋಡಿದಳು. ತಂದೆಯ ಕೊಠಡಿಯಲ್ಲಿ ಸಣ್ಣದಾಗಿ ಎಣ್ಣೆಯ ದೀಪ ಇನ್ನೂ ಉರಿಯುತ್ತಿತ್ತು. ಆ ದೀಪದ ಮಬ್ಬಿನಲ್ಲಿ ನಿಶ್ಶಬ್ದವಾಗಿ ಅಳುತ್ತಾ ಕುಳಿತ ತಾಯಿಯ ಛಾಯೆ...ಅವಳ ಬಳಿಯೇ ಅಂಗೈಯಲ್ಲಿ ತಲೆಯಿರಿಸಿ

ಚಿಂತಾಮಗ್ನರಾಗಿದ್ದ ತಂದೆಯ ಮೂರ್ತಿ...

ತಾಯಿಯ ಅಳುವಿನ ಧ್ವನಿ ನೀರವ ನಿಶೆಯನ್ನು ಭೇದಿಸಿ ಪದ್ದಿಯ ಕಿವಿಗೊರೆದು ವಿಚಾರದ ಅಲೆಗಳನ್ನು ಎಬ್ಬಿಸುತ್ತಿತ್ತು. 'ತಾಯಿ ಯಾಕೆ ಅಳುತ್ತಿರಬಹುದು?' ಎಂದು ಪದ್ದಿ ವಿಸ್ಮಯಪಟ್ಟಳು.

ತಂದೆ ಸಮಾಧಾನದ ಸ್ವರದಲ್ಲಿ, "ಅಳೋದೇಕೆ ಹುಚ್ಚಿ! ಪದ್ದೀಗೆ ಒಳ್ಳೇ ಗಂಡನೇ ಸಿಗ್ತಾನೆ ಬಿಡು" ಎಂದು ಆತ್ಮವಿಶ್ವಾಸದಿಂದ ಹೇಳಿದರು.

ಓ! ತನ್ನ ಮದುವೆಯ ವಿಚಾರಕ್ಕೇ ಇಷ್ಟು ಗೋಳು! ತಂದೆಯ ಧ್ವನಿ ನಿಂತೊಡನೆ ತಾಯಿಯ ಕರ್ಕಶ ಸ್ವರ.

"ಹೂ, ಒಳ್ಳೇ ಗಂಡ ಸಿಗ್ತಾನೆ ಆ ಮೂತಿಗೆ. ಸದ್ಯಃ ಕುರುಡನೋ ಕುಂಟನೋ ಸಿಗದಿದ್ದರೆ ಸಾಕು. ಈ ರೂಪವತೀ ಸೌಂದರ್ಯಕ್ಕೆ ಮಾರುಳಾಗಿ ತಾವೇ ಬಂದು ಮಾಲೆ ಹಾಕುತ್ತಾರೆ ಅಲ್ವೆ? ಮುಖ್ಯ ನನ್ನ ಹಣೆಯ ಬರಹ! ಹೊಟ್ಟೆ ಉರಿಸಿಕೊಳ್ಳೋದಕ್ಕೆ ಈ ಪದ್ದೀನಾ ಹೆತ್ತು ಸಾಕಿದ್ದಷ್ಟೆ!"

ತನ್ನ ಹೆತ್ತ ತಾಯಿಯ ಬಾಯಿಂದ ಆ ಮಾತು ಬರುತ್ತಿತ್ತು.

ಹೆತ್ತಾಕೆಗೆ ಪದ್ದಿ ಬೇಡವಾಗಿದ್ದಾಳೆ—ಒಂದು ಹೊರೆಯಾಗಿದ್ದಾಳೆ. ಅವಳ ಕುರೂಪ ತಾಯಿಯ ಕರುಳಿರಿಯುತ್ತಿದೆ. ಮೊಗಹೆತ್ತಿ ನಾಲ್ಕು ಜನರ ಮಧ್ಯೆ ಓಡಾಡುವ ಹಾಗಿಲ್ಲ, ಎಲ್ಲಿ ಹೋದರೂ, "ನಿಮ್ಮ ಪದ್ದಿಗಿನ್ನೂ ಮದುವೆ ಇಲ್ವೆ?" ಎನ್ನುವ ಸಾಂಪ್ರದಾಯಿಕ ಸವಾಲು.

ಸಮಾಜಕ್ಕೇನು ಹುಚ್ಚು ಹಿಡಿದಿದೆಯೆ? ಯಾರ ಪಾಡು ಕಟ್ಟಿಕೊಂಡು ಅವಕ್ಕೇನು? ಅವರ ಸುಖದುಃಖಕ್ಕೆ ಅದು ನೆರವಾಗುವುದೆ? ಇಲ್ಲವಲ್ಲ... ಆದರೂ ಈ ಹಿರಿತನ, ಹಂಗಿಸುವ ಅಧಿಕಾರ ಯಾಕೆ?

ತಾಯಿ, ತಂದೆಗೆ ಉತ್ತರವೀಯುತ್ತಿದ್ದಾಳೆ.

"ಅವಳಿಗೆ ಸಿಕ್ಕೋನು ಕುಂಟನೋ ಕುರುಡನೋ ಆಗಿದ್ದರೆ ಸಾಕು."

ಅದನ್ನೇ ಪದ್ದಿ ಕೇಳಿದಳು. ಅಷ್ಟೆಯೇ ತನ್ನ ಬೆಲೆ? ತನ್ನ ಬಾಳಿನ ಬೆಲೆ? ಮತ್ತೆ ತಾಯಿ ಹೇಳುತ್ತಿದ್ದಾಳೆ. ಅವಳಿಗೆ ಮದುವೆಯೇ ಆಗೋಲ್ಲ..."

ಮರ್ಮಭೇದಕ ಮಾತು! ಅದರ ಜೊತೆಗೇ ಹೃದಯ ನಡುಗಿಸುವ ಆ ರೋದನ. ಈ ರಾದ್ಧಾಂತವನ್ನೆಲ್ಲಾ ಒಂದು ಕೊನೆಗೆ ತರಬೇಕು, ಎಂಬ ಯೋಚನೆ ಪದ್ದಿಯ ತಲೆಯಲ್ಲಿ ಹಾದುಹೋಯಿತು. ಮಗ್ಗುಲು ತಿರುವಿ

ಮಲಗಿಕೊಂಡಳು. ತಿರುಗಿಕೊಂಡ ರಭಸ, ಏನಾದರೂ ಮಾಡಬೇಕೆಂಬ ಅವಳ ಮನದ ಸಂಕಲ್ಪವನ್ನು ಒತ್ತಿ ಹೇಳಿದ ಹಾಗಾಯಿತು.

* * *

ಕಡೆಗೊಮ್ಮೆ ಈ ಎಲ್ಲ ಅಂಧಕಾರ ಕಳಚಿ ಪದ್ದಿಯ "ಭಾಗ್ಯರವಿ" ಉದಯಿಸಿದ. ಶ್ರೀಮಂತನೊಬ್ಬ ಅವಳನ್ನು ನೋಡಲು ಬಂದ. ಐವತ್ತು ದಾಟಿದ ಪ್ರಾಯ...ಮುಖ ಅಲ್ಲಲ್ಲಿ ಸುಕ್ಕುಗಟ್ಟಿತ್ತು. ಜರಿಯ ರುಮಾಲಿನಂಚಿನಿಂದ ಬಿಳಿಯ ಕೂದಲು ಇಣಕಿ ನೋಡುತ್ತಿದ್ದರೂ ಮೀಸೆ ಮಾತ್ರ ಕಪ್ಪಾಗಿಯೇ ಇತ್ತು. ಅದು ಗಿಲೀಟು ಬಣ್ಣ ಎಂದು ಪದ್ದಿಗೆ ಹೊಳೆಯದೆ ಹೋಗಲಿಲ್ಲ. ವಯಸ್ಸು ಮೀರಿದ್ದ ಕೊರತೆಯನ್ನೆಲ್ಲಾ ಆ ಜರೀಪೇಟ, ಸಿಲ್ಕ್ ಪರಟು, ವಜ್ರದುಂಗುರ ತುಂಬಿಕೊಡುವಂತಿದ್ದುವು.

—ಎರಡನೆಯ ಹೆಂಡತಿ ತೀರಿಕೊಂಡು ಆರೇಳು ತಿಂಗಳಾಗಿದ್ದುವಂತೆ. ಅಷ್ಟೆ! ಈಗ ಇನ್ನೊಂದಕ್ಕಾಗಿ ಬೇಟೆಯಂತೆ. ಅಪಾರ ಬೆಲೆಯ ಆಭರಣಗಳು, ಅಂತಸ್ತಿನ ಮನೆ, ಎಣೆಯಿಲ್ಲದ ಸುಖ...ಎಲ್ಲಾ ಇವೆಯಂತೆ. ಅವನು ಒಪ್ಪಿಯೇ ಹೋದ. ಆದರೆ ಪದ್ದಿ?

ರಾತ್ರೆ ಪತಿಗೆ ಊಟಕ್ಕೆ ಬಡಿಸುವಾಗ ತಾಯಿ, "ಪದ್ದಿ ಅವರ ಕೈ ಹಿಡಿದರೆ ಸುಖವಾಗಿರುತ್ತಾಳೇಂದ್ರೆ, ನಮ್ಮ ಕಿಟ್ಟೀನೂ ಮುಂದೆ ಓದೋಕೆ ಅನುಕೂಲವಾಗುತ್ತೆ..." ಎಂದು ಹೇಳಿದ್ದು ಪದ್ದಿಯ ಕಿವಿಗೆ ಬಿತ್ತು.

ಕಿಟ್ಟಿ ಮುಂದೆ ಓದಿ ಅವನಿಗೆ ದೊಡ್ಡ ಕೆಲಸ ಸಿಕ್ಕಲಿ—ಎಂಬಾಸೆಗೆ ತಾಯಿ ಮಗಳ ಬಲಿ ಕೊಡಹೊರಟಿದ್ದಾಳೆ. ಮಗನ ಸುಖಕ್ಕಾಗಿ ಮಗಳ ಮಾರಾಟ!

ನೂರು ಯೋಚನೆಗಳ ಮಧ್ಯೆ ಆ ಮುದುಕನನ್ನೇ ತಾನು ಕೈ ಹಿಡಿಯಬೇಕೆಂಬ ನಿರ್ಧಾರಕ್ಕೆ ಬಂದು ಮುಟ್ಟಿದಳು ಪದ್ದಿ. ಇನ್ನೆರಡು ದಿನ ಕಾದಿದ್ದರೆ, ಅವಳ ಗುಣ ಮೆಚ್ಚುವಂತಹ ವರ ಸಿಕ್ಕುತ್ತಿದ್ದನೋ ಏನೋ....ಆದರೆ ಇಂತಹ ಶ್ರೀಮಂತ ಬೇರೆ ಸಿಗುತ್ತಾನೆಯೇ? ಅವನು ಹೇಗೆ ಬೇಕಾದರೂ ಇರಲಿ... ಅವಳ ಪಾಲಿಗೆ ಶ್ರೀಮಂತಿಕೆ ಇದ್ದರೆ ಸಾಕು...ಅದರ ಬಲದಿಂದ ಎಲ್ಲರನ್ನೂ ತುಳಿಯಬಹುದು. ಇಂದು ಅವಳನ್ನು ನಿಂದಿಸಿದವರನ್ನೆಲ್ಲಾ ಆಕೆ ಮೆಟ್ಟಿ ನಿಲ್ಲಬಹುದು ..ಇಂಥ ಭಾವನೆಯ ದಳ್ಳುರಿ, ಅವಳ ಕುಸುಮದಂತಹ ಮೃದುವಾದ

ಹೃದಯುವನ್ನು ಕಲ್ಲಾಗಿ ಮಾಡಿತು. ಇವೆಲ್ಲಕ್ಕಿಂತ ಮಿಗಿಲಾಗಿ ಅವಳಿಂದ ಕಿಟ್ಟಿಯು ಉದ್ಧಾರ. ಅವಳನ್ನು ಇಂದು ಜರೆದ ತಾಯಿ ನಾಳೆ ಕಿಟ್ಟಿಯ ಪರ, ಅವಳ ಮುಂದೆ ಯಾಚನೆಮಾಡುತ್ತಾಳೆ...ಇದೆಲ್ಲಾ ಆಗಬೇಕಾದರೆ ಕೂಡಿ ಬರಬೇಕಾದರೆ, ಇದೊಂದೇ ಮಾರ್ಗ. ಹೌದು ಇದೊಂದೇ ದಾರಿ...ಹಾಗೆ ಅವಳ ಯೋಚನೆ ಹರಿಯಿತು.

ತಂದೆಗೆ ಮಗಳ ಮೇಲೆ ಸ್ವಲ್ಪ ಮಮತೆ. ಆದರೆ ಸಮಾಜದ ಸಂಪ್ರದಾಯ ಆ ಮಮತೆಯನ್ನು ಕಸಿದುಕೊಂಡಿತ್ತು. ತಂದೆಯ ಪ್ರೇಮ, ಪದ್ದಿಗೊಬ್ಬ ಗಂಡ ದೊರೆತರೆ ಸಾಕೆನ್ನುವ ಚಿಂತೆಯಾಗಿ ಪರಿಣಮಿಸಿತ್ತು. ಅವರು ಯೋಚನೆಯಲ್ಲಿದ್ದಾಗಲೇ ಪದ್ದಿ ಅವರ ಬಳಿ ಹೋದಳು.

"ಅಪ್ಪಾ! ನಾನು ಇವರನ್ನೇ ಮದುವೆಯಾಗ್ತೀನಿ" ಎಂದು ಹೇಳಿದಳು.

ಸ್ವಲ್ಪ ಗಾಬರಿಯಿಂದಲೇ ತಂದೆ, "ಸರಿಯಾಗಿ ನೋಡಿದಿಯೇನು ಪದ್ದಿ? ಒಪ್ಪಿಗೆಯಾಯಿತೆ ?" ಎಂದು ಮರುಸವಾಲು ಹಾಕಿದರು.

"ಆಗುವುದಾದರೆ ನಾನು ಅವರನ್ನೇ ಆಗೋದು !" ಎಂದು ಪದ್ದಿ ನಿಶ್ಚಿತ ಸ್ವರದಲ್ಲಿ ಹೇಳಿಬಿಟ್ಟಳು.

ಮಗಳೊಪ್ಪಿದ್ದು ನೋಡಿ ತಂದೆ ಆಶ್ಚರ್ಯಪಟ್ಟರು. ಆದರೆ ತಾಯಿ ತುಂಬಾ ಸಂತುಷ್ಟಳಾದಳು.

"ಇನ್ನೇನು, ಪದ್ದಿ ಸುಖವಾಗಿರುವೆ ಬಿಡೂ" ಎಂದು ತಾಯಿ ಹರಸಿದ್ದೂ ಹರಸಿದ್ದೆ ! ಅದನ್ನು ಕೇಳಿ ಫಳಕ್ಕನೆ ಪದ್ದಿಯ ಕಣ್ಣಲ್ಲಿ ಮಿಂಚಿದ ಹನಿ ಅವರಿಗೆ ಕಂಡಿತೋ ಇಲ್ಲವೋ !

* * *

ಅಂತೂ ಮೂಲಾ ನಕ್ಷತ್ರದ ಹುಡುಗಿಗೆ ಮದುವೆಯಾಗಿಹೋಯಿತು. ಪದ್ದಿ, ಪದ್ಮಾವತಿ ಆದಳು. ಶ್ರೀಮಂತರ ಮಡದಿ ಆಕೆ...ಎಲ್ಲಿಲ್ಲದ ಗೌರವ ಈಗ ! ಎಲ್ಲರೂ ಆದರಿಸಿ ಮಾತಾಡಿಸುವವರೆ !

"ಮೂಲಾನಕ್ಷತ್ರದ ಹುಡುಗಿ....ಇನ್ನೂ ಮದುವೆಯಿಲ್ಲ"ಎಂದು ಜರಿದಾಕೆ ಬಂದು, ಪದ್ಮಾವತಿಯನ್ನು ಕೊಂಡಾಡಿ ಹೋದಳು.

"ನಿನ್ನ ಭಾಗ್ಯಕ್ಕೆಣೆಯಿಲ್ಲಮ್ಮ!" ಎಂದು, ಅಂದೊಮ್ಮೆ ಕೆಟ್ಟ ಮಾತಾಡಿದ್ದ ಬಾಕೆ ಹೊಗಳಿ ಹಾಡಿದಳು.

"ನಿಮ್ಮ ಪದ್ದೀ ಮುಸುಡಿಗೇ ನನ್ನ ಮಗೂ ಪೌಡರೆಲ್ಲಾ ಆಗಿಹೋಯ್ತು" ಎಂದು ಚುಚ್ಚಿದ್ದ ನೆರೆಮನೆಯಾಕೆ ಬಂದು—

"ಸಾಕ್ಷಾತ್ ಲಕ್ಷ್ಮೀದೇವಿ ಹಾಗಿದೀಯಮ್ಮ ಪದ್ಮಾವತೀ!" ಎಂದು ಬಾಯಿ ತುಂಬಾ ಹೇಳಿದಳು.

"ಪುಣ್ಯ ಮಾಡಿ ಬಂದಿದ್ದಳೂಂದ್ರೆ. ಹೋದ ಜನ್ಮದಲ್ಲಿ ಒಂದು ಹೂವು ಹೆಚ್ಚು ಹಾಕಿದ್ದಳು...ರತ್ನದಂಥಾ ಗಂಡ ಸಿಕ್ಕಿದ" ಎಂದು ಇನ್ನೊಬ್ಬಳು ದನಿಗೂಡಿಸಿದಳು!

'ರತ್ನದಂಥಾ ಗಂಡನಲ್ಲ, ರತ್ನದಿಂದ ತನ್ನ ಹುಳುಕುಮುಚ್ಚಿಕೊಳ್ಳಲೆತ್ನಿಸುವ ಗಂಡ' ಎಂದುಕೊಂಡಳು ಪದ್ದಿ.

"ಪದ್ದೀ, ಜನ್ಮ ಸಾರ್ಥಕವಾಯಿತೇ!" ಎಂದು ತಾಯಿ, ಅವಳಿಗೆ ದೃಷ್ಟಿ ತಾಗಬಾರದೆಂದು ನೆಟಿಕೆ ಮುರಿದಾಗ ಪದ್ಮಾವತಿಯ ಹೃದಯ ದುಃಖದಿಂದ ಚಿಟಿಲ್ ಚಿಟಿಲೆಂದು ಬಿರಿಯಿತು.

"ಓ...ಒಬ್ಬರಿಗೂನನ್ನ ದುಃಖ ಅರ್ಥವಾಗೊಲ್ಲವಲ್ಲಾ..."ಎಂದು ದೇವರ ಮುಂದೆ ಕುಳಿತು ಅತ್ತುಬಿಟ್ಟಳು. ದೇವರ ಮುಂದೆ ಉರಿಯುತ್ತಿದ್ದ ನಂದಾ ದೀಪದ ಜ್ವಾಲೆ ಹೃದಯದೊಳಗೆ ಹೋದಂತೆ ಭಾಸವಾಯಿತು. ಉರಿಯುತ್ತಿದ್ದ ಕಿಡಿ, ಭಗ್ಗೆಂದು ಹೊತ್ತಿಕೊಂಡಿತು.

ಗಂಡನ ಮನೆಯಲ್ಲಿ ಬೇಕಾದದ್ದೆಲ್ಲಾ ಇತ್ತು. ಆದರೆ ಸುಖ?

ಗಂಡ! ಹೌದು. ಅದನ್ನು ಮನುಷ್ಯಪ್ರಾಣಿ ಎಂದು ಕರೆಯುವುದೂ ದ್ರೋಹದ ಮಾತು. ಅವನೊಂದು ಬರೇ ಪಶು. ಕಾಮುಕ ಪಶು. ತನ್ನ ಆಶೆಯ ತೃಪ್ತಿಗಾಗಿ, ಬಲಾತ್ಕಾರವಾಗಿ, ಪದ್ಮಳಿಂದೆಲ್ಲವನ್ನೂ ಆತನೇ ಸೆಳೆದು ಕೊಂಡಿದ್ದ. ಅದಕ್ಕೆ ಪ್ರತಿಫಲವಾಗಿ ಅವನು ಅವಳಿಗೆ ಒದಗಿಸಿದ ಒಡವೆ, ವಜ್ರ ವೈಢೂರ್ಯಗಳು ಏನು ಕಡಿಮೆಯೇ?

ಒಂದೆರಡು ಸಾರಿ ತಾಯಿಯಿಂದ ಆಹ್ವಾನ ಬಂತು. ಪದ್ಮಾವತಿ ಹೋಗ ಲಿಲ್ಲ. ಹಿಂದಿನ ಒಂದೊಂದು ದೃಶ್ಯ ಇನ್ನೂ ನೆನಪಿನಲ್ಲಿತ್ತು. ಆಕೆ ತಾಯಿ ಯೆಂಬ ಮಮತೆಯೇ ಮಗಳಲ್ಲಿ ಉಳಿದಿರಲಿಲ್ಲ.

'ಇನ್ನು ಅವಳನ್ನು ನೋಡಬಾರದು' ಎಂದು ಪದ್ಮಾವತಿ ತೀರ್ಮಾನ ಮಾಡಿಕೊಂಡಳು.

'ತಾಯಿ !...ಎಂಥಾ ತಾಯಿ ಆಕೆ? ಚಿಕ್ಕಂದಿನಿಂದಲೂ ಒಂದು ದಿನವಾದರೂ ತನ್ನನ್ನು ಪ್ರೀತಿಸಿದಳೆ? ಕುರೂಪಿಯೆಂದು ಹೀಗಳೆಸಿಕೊಂಡೇ ಬೆಳೆದದ್ದಾಯಿತು. ಬೆಳೆದಾದ ಮೇಲೆ ಮೂಲಾ ನಕ್ಷತ್ರದ ಕಾಟ ಅಂದಿನವರೆಗೆ. ತಾಯಿ ಹೀಗೆ ಮಾಡಬಹುದೆ ?'

ತಾಯಿ ಒಮ್ಮೆ ಪತ್ರ ಬರೆದಿದ್ದಳು.

"ನಿನ್ನ ಬಿಟ್ಟರೆ ನಮಗೆಲ್ಲಾ ಬೇರೆ ಗತಿಯಿಲ್ಲ. ಕಿಟ್ಟು ಮುಂದೆ ಓದೋಕೆ ನೀ ಸಹಾಯ ಮಾಡಬೇಕು. ನಿನ್ನುಪಕಾರ ನಾವು ಸದಾ ನೆನೆಸುತ್ತಿರುತ್ತೇವೆ" ಇತ್ಯಾದಿ ಇತ್ಯಾದಿ.

ಹಿಂದೆ ಬೇಡವಾಗಿದ್ದ ಮಗಳಿಂದ ಈಗ ಸಹಾಯದ ಯಾಚನೆ !

ಕಿಟ್ಟಿಗಾಗಿ, ಅಂದು ಜರೆದ ತಾಯಿ ಇಂದು ತನ್ನನ್ನು ಬೇಡುತ್ತಾಳಲ್ಲಾ... ಅದೇ ತೃಪ್ತಿ ಆಕೆಗೆ...ತನ್ನ ಬಾಳು ಹಾಳು ಮಾಡಿಕೊಂಡು ಬದುಕಿದ್ದರೆ, ಸಾರ್ಥಕ...ಅದೊಂದು ಕಾರ್ಯಸಾಧನೆ, ಆವಳ ಪಾಲಿಗೆ.

ದಿನಗಳು ವರ್ಷಗಳಾಗಿ ಉರುಳಿದಂತೆಲ್ಲಾ ತಾಯಿ ಮಗಳ ವಿಷಯವಾಗಿ ಎಣೆಯಿಲ್ಲದ ಪ್ರೇಮ ತೋರತೊಡಗಿದಳು.

"ನಮ್ಮ ಭಾಗ್ಯದೇವತೆ ನೀನು. ಈ ಸಲ ಖಂಡಿತವಾಗಿ ಬಾ. ನೋಡ ಬೇಕೆನಿಸುತ್ತೆ. ನನಗೂ ಮೈ ಸರಿಯಾಗಿಲ್ಲ" ಎಂದು ಬರೆಸಿದಳು ಒಮ್ಮೆ. ಪದ್ಮಾವತಿಯ ಮನ ಚಿಂತೆಗೀಡಾಯಿತು.

ಗಂಡ ಕೂಡ ಒಮ್ಮೆ ಅವಳ ತಲೆ ನೇವರಿಸುತ್ತಾ, "ಒಂದು ಸಾರಿ ನಿಮ್ಮಮ್ಮನ ಮನೆಗೆಹೋಗಿ ಬಾ ಪದ್ದೂ!" ಎಂದು ಹೇಳಿದ. ಆವಳ ತಲೆಯಲ್ಲಿ ಓಡಾಡುತ್ತಿದ್ದ ಅವನ ವಜ್ರ ತುಂಬಿದ ಬೆರಳುಗಳು ಪದ್ಮಾವತಿಯ ಪಾಲಿಗೆ ಚೇಳಿನ ಸಮಾನವಾಗಿ ತೋರಿದವು. ಮನೆಯವರನ್ನೊಮ್ಮೆ ನೆನೆದು ಮನ ವ್ಯಾಕುಲಗೊಂಡ ಹಾಗಾಯಿತು. ಆದರೂ ದೃಢ ನಿಶ್ಚಯ ಮಾಡಿ ಹೇಳಿದಳು.

"ನಾನು ಹೋಗೊಲ್ಲ."

"ಹುಚ್ಚು ಹುಡುಗಿ..." ಎಂದು ಪತಿ ಕನಿಕರ ತೋರಿಸಿದ.

ಕಡೆಗೊಂದು ದಿನ ಟೆಲಿಗ್ರಾಂ ಬಂತು.

"ತಕ್ಷಣ ಬಾ...ಸಕತ್ ಕಾಹಿಲೆ. ಸಾಯುವ ಮುನ್ನ ನಿಮ್ಮನ್ನು ನೋಡ ಬೇಕೂಂತಿದ್ದಾಳೆ" ಎಂದು ತಂದೆ ತಾರು ಬಿಟ್ಟಿದ್ದರು. ಹೆತ್ತಮನೆಯನ್ನು

ಹಿಂದೆ ಬಿಟ್ಟು ಸುಖದ ಸುಡುಗಾಡಿಗೆ ಬಂದಿದ್ದ ಪದ್ಮಾವತಿ ಉದ್ವೇಗದಿಂದ ತುಟಿ ಕಚ್ಚಿಕೊಂಡಳು.

ತಾರು ಓದಿ ಹೇಳಿದ ಪತಿ, 'ಹೋಗೋದಿಲ್ವೆ?' ಎಂದು ಕೇಳಿದಾಗ, ಆಕೆ ಸರಕ್ಕನೆ ಒಳಗೆ ಹೊರಟುಹೋದಳು.

ಚಿಂತೆ ಅವಳ ಮನಸ್ಸನ್ನು ಕವಿಯಿತು.

ಅವಳ ಜೀವನದಲ್ಲೇ ಮೊದಲಬಾರಿಗೆ ಒಂದು ಯೋಚನೆ ಬಂತು.

ತಾನು ತಾಯಿಯನ್ನು ದ್ವೇಷಿಸುವುದು ಸರಿಯೆ ? ತನ್ನ ಬಾಳು ಹಂಡಿ ಗೂಡಿಸಲು ಅವಳನ್ನು ಪ್ರೇರೇಪಿಸಿದ್ದು ಇಂದಿನ ಸಮಾಜವಲ್ಲವೆ ? ತಪ್ಪು ಆ ಸಮಾಜದ್ದಲ್ಲವೆ...?

...ವಿಚಾರದ ತಿಕ್ಕಾಟ, ಅವಳನ್ನು ನೋವಿನ ಮಡಿಲಿಗೆ ನೂಕಿತು. ಅದರ ಬಿಸಿ ತಾಳಲಾರದೆ ಆಕೆ, ಹಿಂದಿದ್ದ ಸೋಫಾದ ಮೇಲೆ ಕುಸಿದುಬಿದ್ದಳು.

ಎರಡು ದಿನಗಳ ಮೇಲೆ, ಆ ಕೆಟ್ಟ ಸಮಾಚಾರ ಬಂತು. ಆಕೆಯ ತಾಯಿ ತೀರಿಕೊಂಡಿದ್ದಳು.

ಬರಸಿಡಿಲೆರಗಿದಂತಾಯಿತು ಅದನ್ನು ಕೇಳಿದೊಡನೆ. ಆವರೆಗೆ ಅವಳ ಹೃದಯದಲ್ಲಿ ಹತ್ತಿಕ್ಕಿದ್ದ ದ್ವೇಷ—ದುಃಖ ಕರಗಿ ಹನಿಯಾಗಿ, ಕಣ್ಣಾಲಿ ಗಳಿಂದ ಕೆಳಗಿಳಿದು ಬಂದುವು. ಪದ್ಮಾವತಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು.

ಆಗಸ್ಟ್, ೧೯೫೧

# ಷಹಜಹಾನ್ ಚಂದಣ್ಣ

ಅಬ್ಬಾ...ಅಬ್ಬಾ...ಏನು ಸಡಗರ ಅದು ! ಏನು ಸಿದ್ಧತೆ !

ನಸುಕಿನಿಂದ ಜಮೀನ್ದಾರನ ಮನೆ ಮುಂದೆ ಒಂದೇ ಸಮನೆ ಕೆಲಸ ನಡೆದಿತ್ತು. ಊರಿನ ಹಲವಾರು ಹಿರಿಯ ಮುತ್ತೈದೆಯರು ಸಾರಿಸಿ, ಗುಡಿಸಿ, ರಂಗೋಲಿ ಹಾಕುತ್ತಿದ್ದರು. ಈಟಿಗರ ಮಾದಣ್ಣ ಸಂಗಡಿಗರೊಂದಿಗೆ ದೊಡ್ಡ ಹಸಿರುವಾಣಿ ಚಪ್ಪರ ಕಟ್ಟುತ್ತಲಿದ್ದ. ಆ ಮಾವಿನೆಲೆಯ ಶೃಂಗಾರ, ಆ ತೋರಣ, ಆ ಘಮಘಮಿಸುವ ಹೂವಿನ ಮಾಲೆಗಳು, ಹೊತ್ತಿಸಿಟ್ಟ ಊದು ಬತ್ತಿಗಳ ಆ ದೀಪ ಧೂಪ—ಒಂದೇ ? ಎರಡೆ ?

ಕೇರಿಯಲ್ಲಿ ಈ ಸಂಭ್ರಮ ನಡೆದಿದ್ದಾಗಲೇ ಚಂದಣ್ಣ ಮನೆಯಿಂದ ಹೊರಗೆ ಬಂದ, ಗಡಸುತನವನ್ನು ಬಿಡದೆ ಠೀವಿಯಿಂದಲೇ ಆ ಚಪ್ಪರದೊಳಗೆ ನಡೆದು ಬಂದ.

''ನಮಸ್ಕಾರ ಧಣೀರಾ...ಅಡ್ಡಬಿದ್ದೆ ಬುದ್ಧೀ...'' ಎಂದು ಹಲವಾರು ಕಡೆಗಳಿಂದ ಜಮೀನ್ದಾರನಿಗೆ ಸಂಭ್ರಮದ ವಂದನೆಗಳು ಬಂದು ತಲಪಿದುವು. ಮುಗುಳ್ನಗೆಯಿಂದಲೇ ಅವೆಲ್ಲವನ್ನೂ ಸ್ವಾಗತಿಸಿ, ಜಮೀನ್ದಾರ ಚಪ್ಪರದ ಹೊರಗೆ ಬಂದು ನಿಂತ. ತಾನು ಬೆಳೆದು ಬಾಳಿದ ತನ್ನ ಮನೆಯ ಕಡೆ, ಒಂದು ಗಳಿಗೆ ಹಾಗೇ ನಿಂತು ನೋಡಿದ.

ಏನೋ ಅವ್ಯಕ್ತ ಆನಂದದ ಅನುಭವವಾಗುತ್ತಿತ್ತು ಅವನಿಗೆ . ಮರೆ ಮಾಡಿದ್ದ ಸಾವಿರ ಮಧುರ ನೆನಪುಗಳು ಅವನ ತಲೆಯಲ್ಲಿ ವೇಗದಿಂದ ಸುತ್ತು ತ್ತಿದ್ದುವು.

ಹಳ್ಳಿಯ ಪುರೋಹಿತರು ಕಚ್ಚೆ ಕಟ್ಟಿ, ಬೇಗ ಬೇಗ ಗೌಡನ ಬಳಿಗೆ ಬಂದರು. ತನ್ಮಯನಾಗಿದ್ದ ಚಂದಣ್ಣನನ್ನು ಹಿಡಿದಲುಗಿಸಿ ''ಜಮೀನ್ದಾರ್ರೆ... ಮುಹೂರ್ತ ಮೀರಿಹೋಗಂತ್ತೆ ಇನ್ನು...ನೀವು ಮುಂದೆ ಹೊರಟ್ಬಿಡಬೇಕು!'' ಎಂದು ಹೇಳಿದರು.

ಗೌಡ ಬೆಚ್ಚಿ ನಿಂತ. ಪುರೋಹಿತರನ್ನು ನೋಡಿದೊಡನೆ ಮಂದಹಾಸ ಅವನ ತುಟಿಗಳಲ್ಲಿ ಮಿನುಗಿತು. ಅವರು ಹೇಳಿದ ಮಾತು ಅವನಿಗೆ ಕೇಳಿಸ ದಿದ್ದರೂ,ಏನು ಹೇಳಿರಬಹುದೆಂಬುದು ಅವನಿಗೆ ಹೊಳೆಯಿತು. ''...ಹೊರಟೆ,

ಹೊರಟೆ !'' ಎಂದಷ್ಟು ಮಾತ್ರ ಹೇಳಿ ನಿಧಾನವಾಗಿ ಒಳಗೆ ನಡೆದುಹೋದ.

ಎರಡು ಗಳಿಗೆಯಲ್ಲೇ ಚಂದಣ್ಣ ಪೂರ್ಣಾಲಂಕೃತನಾಗಿ ಹೊರಗೆ ಬಂದ. ಬೆಲೆಬಾಳುವ ಮುಕಮಲ್ಲಿನ ಕರಿಯ ಕೋಟು, ನಾಲ್ಕು ಬೆರಳಂಚಿನ ಜರತಾರೀ ರೇಷ್ಮೆ ಪಂಚೆ...ಅಷ್ಟೆ, ಹೆಚ್ಚಿನಾಡಂಬರವಿಲ್ಲ. ಆದರೂ ಮದುವಣಿಗನಂತೆ ಕಾಣುತ್ತಿದ್ದ.

ಅಂತೂ ಆತ ಮುಂದೆ ಹೊರಟ.

ಅಲ್ಲಿನ ಹೆಂಗಳೆಯರು ಗುಸಗುಸ ಮಾತಾಡಿಕೊಂಡು, ''ಜಮೀನ್‌ದಾರ್ರು ಹೆಂಡತೀನಾ ಕರೆತರಲು ಹೊರಟ್ರು'' ಎಂದು ಹೇಳಿಕೊಂಡರು. ಅಷ್ಟೇ ಅಲ್ಲ, ಅವನ ಮೇಲೆ ಪ್ರಶಂಸೆಯ ಮಾತುಗಳು ಮಳೆಗರೆದುವು.

''ಶ್ರೀರಾಮ ದೇವರಂತಾ ಸತ್ಯವ್ರತನಮ್ಮಾ...ಇಂದವ್ವ ಪುಣ್ಯ ಮಾಡಿದ್ಲು ಈತನ ಕೈ ಹಿಡಿಯೋಕೆ....'' ಇನ್ನು ಎಷ್ಟೋ ಅಂಥವು.

ಆ ಊರಿಗೆ ಹೊಸದಾಗಿ ಬಂದಿದ್ದ ಪುಟ್ಟನ ಹೆಂಡತಿ ''ಎಲ್ಲಿಗಮ್ಮಾ— ಜಮೀನ್‌ದಾರ್ರು ಹೋಗಿದ್ದು?'' ಎಂದು ಪಕ್ಕದಲ್ಲಿದ್ದಾಕೆಯನ್ನು ಕೇಳಿದಳು. ಆಕೆ ನಸುನಕ್ಕಳು.

''ಚಂದಣ್ಣನೋರೆ....? ಹೆಂಡ್ತೀ ತವರ್ನಿಂದ ಬಂದಿದ್ದಾಳೆ. ಕರಕೊಂಡು ಬರೋಕೆ ಹೋಗ್ಯಾರೆ!'' ಎಂದಳು. ಮಾತಿನ ಹಿಂದೆ ಬಿಸುಸುಯ್ಲೊಂದು ತೇಲಿ ಬಂತು.

ಚಂದಣ್ಣ ಇವರಮಾತು ಕೇಳಿಸಲಾರದಷ್ಟು ಅಂತರದಲ್ಲಿ ಹೋಗುತ್ತಿದ್ದ... ಬೇಗನೆ ತನ್ನ ಮುದ್ದಿನ ಮಡದಿಯನ್ನು ಕಾಣಬೇಕೆಂಬಾಸೆ ಅವನಿಗೆ. ಇಡೀ ಒಂದು ವರ್ಷದಿಂದ ಅಗಲಿದ್ದ ಪ್ರೇಮದ ರಾಣಿಯನ್ನು ನೋಡಲು ಅವನ ಮನ ಎಷ್ಟು ತವಕಿಸಿರಲಿಲ್ಲ...!

ಬೇಗ ಬೇಗ ಹೆಜ್ಜೆ ಹಾಕಿದ. ಆ ಅವರೆ ಹೊಲ ದಾಟಿ, ಮುಂದೆ ಕಾಲು ಹಾದಿಯಲ್ಲಿ ಹೋದಾಗ, ಆ ದೇವಸ್ಥಾನ ಕಣ್ಣಿಗೆ ಬಿತ್ತು...ಅವನ ಪಾಲಿಗೆ ಅದೊಂದು ಸ್ವರ್ಗ. ಅದಕ್ಕಿಂತ ಹೆಚ್ಚು—ಓ ಇನ್ನೇನು ಕೇವಲ ಎರಡೇ ಮಾರು....! ಆಮೇಲೆ ತನಗಾಗಿ ಕಾಯುತ್ತಿರುವ ತನ್ನ ಹೃದಯದರಸಿಯನ್ನು ಕಾಣಬಹುದು ... ಕಾಣಬಹುದು ...ಇನ್ನೇನು ಎರಡೇ ಮಾರು. ಆಗಲೇ ರಾಜಾಚಾರಿ ಸಿಕ್ಕಿದ್ದು. ತಲೆಬಾಗಿ, ನಮಸ್ಕರಿಸಿ ಆತ, ''ಎಲ್ಲಾ ಸಿದ್ಧವಾಗಿದೆ

ಸ್ವಾಮಿಾ !" ಎಂದು ಹೇಳಿದ. ಚಂದಣ್ಣ ಅವನ ಕಡೆಗೆ ತಿರುಗಿ ನೋಡಿದ. ಮಾತೇ ಹೊರಡಲಿಲ್ಲ. ಬೇಗ ಬೇಗ ಮುಂದೆ ಹೊರಟುಹೋದ.

ಇಂದವ್ವ ಕಾದು ಕುಳಿತಿದ್ದಳು. ಮೈ ಮನಸ್ಸು ಒಂದಾಗಿ ಆಕೆ ಚಂದಣ್ಣನ ಬರುವಿಕೆಗಾಗಿ ಕಾದು ಕುಳಿತಿದ್ದಳು. ಅವಳ ಮುಖದ ಭಾವ ನೋಡುತ್ತಲೇ ಚಂದಣ್ಣನಿಗೆ ಅದು ಹೊಳೆದುಹೋಯಿತು.

ಚಂದಣ್ಣ ರಭಸದಿಂದ ಅವಳ ಬಳಿಗೋಡಿದ. ಅವಳ ಹತ್ತಿರ ಬರುತ್ತಿದ್ದಂತೆ ಅವನ ಹೃದಯ ಉದ್ವಿಗ್ನತೆಯಿಂದ ಹೊಡೆದುಕೊಳ್ಳತೊಡಗಿತು. ಉಸಿರು ನಿಧಾನವಾಯಿತು...ಅಷ್ಟುದೂರ ನಡೆದುಬಂದವನಿಗೆ ಇನ್ನೊಂದೆರಡು ಮಾರು ನಡೆಯಲು ಕಷ್ಟವೇ ?

ಅದೇ ನಗುಮುಖ. ಅದೇ ತುಂಬಿದ ನೋಟ....

ಮೈತುಂಬಾ ಒಡವೆ ಹಾಕಿಕೊಂಡಿದ್ದಳು ಇಂದವ್ವ.

ಆ ಹಾಲುಗೆನ್ನೆಗಳಿಗೆ ನಯವಾಗಿ ಸವರಿದ ಅರಸಿನ...ಮುದ್ದಾಗಿ ಹುಬ್ಬುಗಳ ಮಧ್ಯೆ ಇರಿಸಿದ್ದ ಕುಂಕುಮದ ಬೊಟ್ಟು...ಮಧ್ಯಕ್ಕೆ ಬೈತಲೆ ತೆಗೆದು ಓರಣವಾಗಿ ಗಂಟುಹಾಕಿಕೊಂಡಿದ್ದ ಕೇಶರಾಶಿ...ಆ ತುರುಬಿಗೆ ಲಕ್ಷಣವಾದ ಹೂವಿನದಂಡೆ...ಮೂಗಿನಲ್ಲಿ ಮುದ್ದಾದ ಮೂಗುಬೊಟ್ಟು...ಕಿವಿಯ ಓಲೆಯ ಮೇಲೆ ಹಾದುಹೋದ ಹರಳಿನ ಸರಪಣಿ...

ಪೂರ್ಣ ಬಂಗಾರದಲ್ಲಿ ಮಾಡಿದ್ದ ಪ್ರತಿಮೆಯ ಹಾಗಿದ್ದಳು ಇಂದವ್ವ.

"ಓ, ಎಂಥ ರೂಪಸುಂದರಿ ! ನನ್ನ ಇಂದಿ !" ಎಂದುಕೊಂಡ ಚಂದಣ್ಣ.

ಬಹಳ ದಿನ ಅಗಲಿದ ವಿರಹಿಗಳು ಮೊದಲ ಸಾರೆ ನೋಡಿದಾಗ ಏನೂ ಮಾತಾಡಲಾಗುವುದಿಲ್ಲವಂತೆ—ಹಾಗೇ ಇಲ್ಲೂ ಆಯಿತು. ಆಕೆಯೊಡನೆ ಏನೇನೋ ಮಾತಾಡಲು ಬಂದ ಚಂದಣ್ಣನಿಗೆ ಒಂದು ಮಾತೂ ಹೊರಡಲಿಲ್ಲ. ಆಕೆಯ ಕೈ ಹಿಡಿದು "ಇಂದೀ...ಇಂದೀ..." ಎಂದ. ಅವನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿದುಹೋಯಿತು....ಆಕೆಗೂ ಹಾಗೆಯೇ ಆಯಿತೇನೋ! ಗೌಡ ಕಣ್ಣೆತ್ತಿ ನೋಡಿದಾಗ ಅವಳೂ ಅಳುತ್ತಿದ್ದಾಳೆನಿಸಿತು...

"ಇದೇನು ಅಳೋಕೆ ಬಾದವೇ ನಾವಿಲ್ಲಿ...? ಮನೆಗೆ ಹೋಗೋಣ ಏಳಿನ್ನು !" ಎಂದು ಗೌಡನೆಂದ.

"ಇನ್ನೂ ಸ್ವಲ್ಪ ಹೊತ್ತು ಇಲ್ಲೇ ಕೂಡೋಣ" ಎಂದು ಇಂದಿ ಹೇಳಿದ

ಹಾಗಾಗಿ, ಆತ ಅವಳ ಬದಿಯಲ್ಲೇ ಕುಳಿತ...

ಇಬ್ಬರಿಗೂ ಏನೇನೋ ಮಾತಾಡಬೇಕೆಂದು ಮನಸ್ಸು. ಆದರೆ ಯಾರಿಗೂ ಮಾತಾಡಲಾಗಲೇ ಇಲ್ಲ. ಗೌಡ ಮತ್ತೆ ತಿರುಗಿ, ಕಣ್ಣು ತುಂಬಾ ಇಂದಿಯನ್ನು ನೋಡಿದ. ಆಕೆ ತುಟಿ ತೆರೆದು ಕಿಸಕ್ಕನೆ ನಕ್ಕ ಹಾಗಾಯಿತು.

"ನೀನು ನಕ್ಕಾಗ ತುಂಬಾ ಮುದ್ದಾಗಿ ಕಾಣುವಿ ಇಂದೀ!" ಎಂದ ಗೌಡ.

"ಓ!" ಎಂದಾಕೆ ಹೇಳಿದಳು.

"ನೆನಪೆ? ನೆನಪೆ? ನಾಲ್ಕು ವರ್ಷಗಳ ಹಿಂದೆ...?"

ನೆನಪಿಗೆ ಬರಲಿಲ್ಲ ಎಂಬಂತೆ ಆಕೆ ತಲೆಯಾಡಿಸಿದಳು.

"ಇಷ್ಟು ಬೇಗ ಮರೆತುಹೋದಿಯೇನೆ?...ನನಗಿನ್ನೂ ಈಗ ನಡೀತಿರೋ ಹಾಗಿದೆ. ನಾನು ನಿಮ್ಮೂರಿಗೆ ಬಂದಿದ್ದೆ. ಅಪ್ಪ, ನಿನ್ನ ನನಗೆ ತಂದುಕೋ ಬೇಕಂತ ಮಾತುಕತೆ ನಡೆಸೋಕೆ ನನ್ನೂ ಕರೆದುಕೊಂಡು ನಿಮ್ಮೂರಿಗೆ ಬಂದಿದ್ದರು...ಹೂಂ. ನೀನಾಗ ಮನೇಲಿ ಇರಲಿಲ್ಲ. ನೀರು ತರಲು ಕೆರೆಗೆ ಹೋಗಿದ್ದಿಯಂತೆ. ನಿನ್ನ ನೋಡಬೇಕೆನಿಸ್ತು ನನಗೆ!...ಅಪ್ಪನಿಗೆ ಹೇಳದೇನೇ ಕೆರೆಯ ಕಡೆ ಹೊರಟೆ ನಾನು..."

"ಹೇಳಿ..." ಎಂದಾಕೆ ಅವನಿಗೆ ಉತ್ಸಾಹ ತುಂಬಿದಳು.

"ಕೆರೆಯಲ್ಲಿ ಹಲವಾರು ಹೆಂಗಳೆಯರು ನೀರು ತುಂಬುತ್ತಿದ್ದರು. ನೀನೂ ಅವರ ನಡುವೆ ಇದ್ದೆ. ಆದರೆ ನಿನ್ನ ಹುಡುಕೋ ಬಗೆ?...ದಂಡೆಯ ಮರದ ಬುಡಕ್ಕೆ ಒರಗಿ ನಿಂತು ನಾನು ಎಲ್ಲರನ್ನೂ ಮಿಕಿ ಮಿಕಿ ನೋಡತೊಡಗಿದೆ... ನಿನ್ನನ್ನು ಗುರುತಿಸಿ ಒಪ್ಪಿಕೊಂಡೆ. ನೀನೊಬ್ಬಳು ರೂಪಸಿ. ಆ ರತ್ನಮಣಿ, ಇತರ ಕಲ್ಲುಗಳ ಮಧ್ಯೆ ಇದ್ದರೂ ಹೊಳೆದು ಪ್ರಕಾಶಿಸಿ, ಇಲ್ಲಿದ್ದೀನಿ ನಾನು, ಎಂದಿತು...

"ಹಾಗೇ ನೋಡುತ್ತ ನಿಂತಿದ್ದಾಗಲೇ ನೀನು ಜೊತೆಯವರೊಡನೆ ಬಂದೆ. ನಾನಿನ್ನೂ ನೋಡುತ್ತಲೇ ಇದ್ದೆ...ನೀನು ತುಟಿ ಕಚ್ಚಿ ಒಂದು ಗಳಿಗೆ ನನ್ನ ನೋಡಿ ಮುಖ ತಿರುಗಿಸಿದೆ. ಪಕ್ಕದ ಗೆಳತಿಯನ್ನು ತಿವಿದು 'ಅಲ್ಲಿ ನೋಡು, ಅದ್ಯಾವುದೋ ಪ್ರಾಣಿ ಹ್ಯಾಗೆ ನೋಡ್ತಿದೆ?' ಅಂತ ಹೇಳಿ ನಕ್ಕೆ—ಸಾವಿರ ಚೇಳು ಕುಟುಕಿದಂತಾಯಿತು ನನಗೆ...ಆಗ ಕಣ್ಣಲ್ಲಿ ನೀರು ತುಂಬಿತು...!"

ಚಂದಣ್ಣ ಅಲ್ಲಿಗೇ ನಿಲ್ಲಿಸಿಬಿಟ್ಟು ಇಂದವ್ವನ ಕಡೆಗೆ ನೋಡಿದ. ಆಕೆ ಅನನ್ಯ ಮನಸ್ಕಳಾಗಿ ಕೇಳುತ್ತಿದ್ದಳು...

"ಯಾಕೆ ನಿಲ್ಲಿಸಿದಿರಿ ? ಹೇಳಿ!" ಎಂತ ಆಕೆ ತನ್ನ ಕಣ್ಣುಗಳಿಂದಲೇ ಮಾತಾಡಿದಳು.

ಗೌಡ ಭಧ್ರವಾಗಿ ಅವಳ ಕೈ ಹಿಡಿದು ಅಮುಕಿ, "ಆದರೂ, ನಿನ್ನ ನಾನು ತುಂಬಾ ಪ್ರೀತಿಸ್ತಿದ್ದೆ ಇಂದೂ !" ಎಂದು ಹೇಳಿ ಕಥೆ ಮುಂದುವರಿಸಿದ :

"ಮನೆಯಲ್ಲಿ ನಿನ್ನ ತಿರುಗಿ ನೋಡಿದೆ, ಬಾಡಿದ ಕನಸು ಮತ್ತೆ ಚಿಗುರಿತು... ನಿನ್ನೊಬ್ಬಳನ್ನೇ ನಾನು ಪ್ರೀತಿಸಿದ್ದು ಇಂದೀ! ನಿನ್ನೊಬ್ಬಳನ್ನೇ ನಾನಷ್ಟು ಪ್ರೀತಿಸಿದ್ದು! ತಂದೆ 'ಇಂದವ್ವ ಹೇಗಿದ್ದಾಳೆ?' ಎಂತ ಕೇಳಿದಾಗ, ಸಂತೋಷ ದಿಂದ ನಕ್ಕುಬಿಟ್ಟೆ. 'ಅವಳ್ನೇ ಆಗ್ತೀನಿ' ಎಂದು ನಾಚಿಕೆಯಿಂದ ಅಪ್ಪನಿಗೆ ಹೇಳಿದೆ. ಅಪ್ಪನಿಗೂ ಹಿಂದಿನ ನೆನಪು ಆಗಿರ್ಬೇಕು. ಒಳ್ಳೇ ಕಾಲ ಬಂತಪ್ಪಾ ಅಂತೂ ! ನಮ್ಮ ಕಾಲ್ದಲ್ಲಿ ಇಂಥಾದೇನೂ ಇರ್ಲೇ ಇಲ್ಲ. ಮದುವೆಯಾದ ಮೇಲೆ ಹೆಂಡ್ತಿ ಮುಖ ಕಾಣುತ್ತಿದ್ದದ್ದು!' ಎಂತ ನನ್ನ ನೋಡಿ ನಕ್ಕರು. ನಿನ್ನ ನೆನಪು ಬಂದಾಗಲೆಲ್ಲಾ ನನಗೆ ರೋಮಾಂಚವಾಗುತ್ತಿತ್ತು."

ಇಂದೀ ಕುಲು ಕುಲು ನಗುತ್ತಿದ್ದುದು ಅವನಿಗೆ ಕೇಳಿಸಿತು. ಆದರೂ ಮುಂದೆ ಹೇಳಿದ :

"ಆಗಲೇ ನೀನು ನನ್ನ ಸುಂದರ ಸ್ವಪ್ನವನ್ನು ಒಡೆದುಬಿಟ್ಟೆ—ಚೂರು ಮಾಡಿಬಿಟ್ಟೆ—ಆಂ ! ಹೌದು ಅದೀಗ ನೆನಪಿಗೆ ಬರ್‍ತಾ ಇದೆ—ನಾನು ಆ ರಾತ್ರೆ ಮರಳು ದಿಬ್ಬದ ಮೇಲೆ ಬೆಳದಿಂಗಳಲ್ಲಿ ಒರಗಿದ್ದೆ. ಅಪ್ಪ 'ಬಾರೋ ನೆಗಡಿ ಆದೀತು !' ಎಂತ ಕೂಗಿದರೂ, 'ಬಂದೇ...ಬಂದೇ' ಎನ್ನುತ್ತಲೇ ಇದ್ದೆ. ಆದರೆ ಎದ್ದು ಮಾತ್ರ ಹೋಗಲಿಲ್ಲ...ಆಗಲೇ ನೀನು ಬಂದದ್ದು...ಆ ತೆಳುವಾದ ಬಿಳೀ ಸೀರೆ ನಿನ್ನ ಮೈ ಮುಚ್ಚಿತ್ತು. ಒಳ್ಳೇ ದೇವತೆಯ ಹಾಗೆ ನೀನು ತೇಲಿ ಬಂದೆ...ಆ ಹೊತ್ತಿನಲ್ಲಿ ನೀನು! ನಾನಂತೂ ಕನಸಿನಲ್ಲೂ ಎಣಿಸಿರಲಿಲ್ಲ. 'ಅದು ಯಾರು ? ಇಂದೀನೇ?' ಎಂತ ಕೇಳಿದೆ. 'ಹೂಂ !' ಎಂತ ಗುಡುಗಿದೆ ನೀನು...

"ಅಲ್ಲೇ ಸ್ವಲ್ಪ ದೂರದಲ್ಲಿ ನೀನು ಕುಳಿತು 'ನಾ ನಿನ್ನ ಪ್ರೀತಿಸೋಲ್ಲ, ಗೊತ್ತೋ?' ಎಂದೆ. ಆಗ ಕಣ್ಣು ಬಾಯಿ ಬಿಟ್ಟೆ ನಾನು...ನೀನು ಏರು

ತಗ್ಗಿಲ್ಲದ ಧ್ವನಿಯಲ್ಲಿ 'ನಾ ನಿನ್ನ ಪ್ರೀತಿಸೋಲ್ಲ ಮದುವೆ ಖಂಡಿತ ಆಗ ಬಾರದು...ಅಪ್ಪನಿಗೆ ನೀನು ಹಾಗೆ ಹೇಳಬೇಕು' ಎಂದೆ.

''ಒಂದೊಂದೇ ಮಾತಿನಿಂದ ನನ್ನ ಹೃದಯವನ್ನು ಇರಿದ ಹಾಗಾಯಿತು. ನಾನು ಮಾತಾಡಲಿಲ್ಲ. ನಿನ್ನನ್ನೇ ನೋಡುತ್ತಿದ್ದೆ. ನೀನು ತುಂಬಾ ಸುಂದರಿ ಯಾಗಿ, ರೂಪರಾಶಿಯಾಗಿ ಕಂಡೆ...ಭದ್ರವಾಗಿ ನಾನು ನಿನ್ನ ಕೈ ಹಿಡಿದೆ. ಆಮೇಲೆ ಒಂದೇ ಗಳಿಗೆ! ನೀನು ಕೈ ಕೊಡವಿಕೊಂಡೆ. ಪಟಾರನೆ ಕೆನ್ನೆಗೆ ಏಟು ಬಿದ್ದುದರ ಅರಿವೂ ಆಯಿತು, ಭೂಮಿ ಆಕಾಶವೆಲ್ಲಾ ಚಕ್ರದಂತೆ ತಿರುಗು ತ್ತಿದ್ದಂತೆ ಭಾಸವಾಯಿತು. ಕಣ್ಣು ಕತ್ತಲೆ ಬಂತು. ಹೀಗಾಗುತ್ತದೆಂದು ನಾನು ಊಹಿಸಿದ್ದೆನೆ? ಅಂತೂ ನೀನು ಹೊರಟುಹೋದೆ!''

—ನೀಳವಾದ ನಿಟ್ಟುಸಿರುಬಿಟ್ಟ ಚಂದಣ್ಣ. ಆ ದುಃಖದ ನೆನಹಿನಿಂದಾಗಿ ಕಣ್ಣೀರು ತುಂಬಿಬಂತು. ಒಂದೊಂದಾಗಿ ಅದನ್ನು ಇಂದಿ ಒರೆಸುತ್ತಿದ್ದಂತೆ ಆತನಿಗೆನಿಸಿತು...

''ಮುಂದೆ ಹೇಳ್ತೀನಿ ರಾಣೀ. ಮದುವೆ ನಡೆಯಲಿಲ್ಲ ಆಮೇಲೆ. ನಿಂತು ಹೋಯ್ತು—ಎಂತ ಜನರೆಲ್ಲಾ ಹೇಳಿದರು. ನನ್ನ ಹೃದಯ ಹೊಡೆದು ಕೊಳ್ಳುವುದೇ ನಿಂತಿತೇನೋ ಎಂದು ನನಗನಿಸಹತ್ತಿತ್ತು. ಆದರೆ ಆ ಪೂರ್ಣ ನಿರಾಶೆಯಲ್ಲೂ ಮನಸ್ಸಿನ ಮೇಲೆ ಅಂಥ ಆಘಾತವಾಗಿದ್ದಾಗಲೂ ನಾನು ನಿನ್ನ ಪ್ರೀತಿಸಿದೆ. ಕೊರಗಿ ಸಣ್ಣಗಾದೆ. 'ಚಂದೂ, ಅವಳಿಲ್ಲದಿದ್ದರೆ ಇನ್ನೊಬ್ಬಳು' ಎಂದು ತಂದೆ ಹೇಳಿದರು. `ಊಹೂಂ' ಎಂದೆ ನಾನು. ಎಲ್ಲರೂ ಅತ್ತರು ನನಗಾಗಿ. ನನಗೊಳ್ಳೆಯದಾಗಲೆಂದು ಅವರು ಬೇರೆ ಬೇರೆ ಮದುವೆ ಗೊತ್ತು ಮಾಡಿದರು. ಒಂದೊಂದೂ ನನಗೆ ದೊಡ್ಡ ದೊಡ್ಡ ಪೆಟ್ಟು ಬೀಳುವಂತಾಗು ತ್ತಿತ್ತು. ಆ ಮಾತು ತಂದೆಗೆ ಹೇಳಿದಾಗ, ಅವರು ಕಣ್ಣೀರಿಟ್ಟರು.

''ನಿನಗೀ ಸಂಗತಿ ತಿಳಿಯದೆಹೋಗಲಿಲ್ಲ. ಮೊದಲು ತಿರಸ್ಕಾರದಿಂದ ನೋಡುತ್ತಿದ್ದ ನನ್ನ ಮೇಲೆ ನಿನಗೆ ಸ್ವಲ್ಪ ಮಮತೆ ಬಂತು. ಈ ಜೀವಿ ನನಗಾಗಿ ಇಷ್ಟು ಕೊರಗುತ್ತಿರುವಾಗ ನಾನು ದ್ರೋಹ ಮಾಡಬೇಕೆ?—ಎಂದು ನಿನ್ನ ತಲೆಯೊಳಗೆ ಮೊದಲಸಾರಿಗೆ ಹೊಳೆಯಿತೇನೋ! ಹೆಣ್ಣು ಕರುಳು!

''ಆ ಕನಿಕರ ಬರಬರುತ್ತಾ ಪ್ರೇಮವಾಯಿತು. ಆಮೇಲೆ 'ಅವರನ್ನೇ ನಾನು ಮದುವೆಯಾಗ್ತೀನಿ!' ಎಂದೆಯಂತೆ. ತಾಯಿ ಸಂತೋಷದಿಂದ 'ಈ ಮಾತು

ಅವತ್ತೇ ಹೇಳಬಾರದಿತ್ತೆ?' ಎಂದರಂತೆ."

ಕಥೆ ಅಲ್ಲಿಗೆ ನಿಂತು, ಇಬ್ಬರೂ ತಿರುಗಿ ನೋಡಿದರು. ಓಲಗದ ಧ್ವನಿ ಕೇಳಿಸ ತೊಡಗಿತು.

"ಅವರೆಲ್ಲಾ ನನ್ನನ್ನೂ ನಿನ್ನನ್ನೂ ಕರೆದೊಯ್ಯಲು ಬರುತ್ತಿದ್ದಾರೆ..." ಎಂದು ಚಂದಣ್ಣ ಸಂತೋಷದಿಂದ ಹೇಳಿದ.

"ಮನೆಗೆ ಹೋಗೋಣ ಇನ್ನು—ನನ್ನ ಮನೆಗೆ!"

"ಹೂಂ..." ಎಂದಾಕೆ ಕುಳಿತೇ ಇದ್ದಳು. ಚಂದಣ್ಣ ಮುಂದಿನ ಕತೆ ಹೇಳಲೇಬೇಕಾಯಿತು. ಅವಳ ಕಣ್ಣಲ್ಲಿ ಮಿನುಗುತ್ತಿದ್ದ ಅಪೂರ್ವ ಆನಂದದ ಕಾಂತಿಯನ್ನು ಅವನು ಗುರುತಿಸಿದ್ದ. ಚಂದಣ್ಣ ಹೇಳಿದ.

"ಆಮೇಲೆ ಸಂಭ್ರಮದ ಆ ಮದುವೆ ನಡೆದೇಹೋಯಿತು.ಅದರ ಅವಶ್ಯಕತೆ ಯೂರಿಗಿದ್ದರೂ ನಮ್ಮಿಬ್ಬರಿಗೆ ಮಾತ್ರ ಇರಲಿಲ್ಲ. ನೀನು ನನ್ನ ಮನೆಗೆ ಬಂದೆ... ನನ್ನ ಹೃದಯ ತುಂಬಿದೆ...ಊರಿನವರಿಗೆ ಬೇಕಾದವಳಾದೆ.

"ಮದುವೆಯಾಗಿ ಎರಡು ವರುಷ ತುಂಬುವ ಮೊದಲೇ ನೀನು ತವರಿಗೆ ಹೋಗಬೇಕಾಯಿತು...ಹೋಗೋಲ್ಲ ಎಂದು ನೀನು ಹಟ ಹಿಡಿದರೂ ಹಿರಿಯರ ಮಾತಿಗಾಗಿ ನೀನು ನನ್ನನ್ನಗಲಿ ಹೋಗಲೇಬೇಕಾಯಿತು. ಹೋದೆ ...ಆದರೆ ತಿರುಗಿ ಬರಲೇ ಇಲ್ಲ ನೀನು—ಬರಲೇ ಇಲ್ಲ.

"ನಿನಗಾಗಿ ತುಂಬಾ ಹಂಬಲಿಸಿದೆ ನಾನು...ನಿನ್ನ ಮರೆಯಲಾಗಲೇ ಇಲ್ಲ ಎಂದಿಗೂ. ಆಮೇಲೆ, ಆಮೇಲೆ, ಇಷ್ಟು ದಿನವಾದ ಮೇಲೆ ಈಗ..."

ಆತ ಅವಳ ಮಡಿಲಲ್ಲಿ ಮುಖ ಮುಚ್ಚಿಕೊಂಡು ಅತ್ತುಬಿಟ್ಟ.

"ಮಾತಾಡು ಇಂದೀ ಮಾತಾಡು!" ಎಂದು ಅವಳ ಕೈ ಹಿಡಿದಲುಗಿಸಿದ. ಆ ದುಃಖದಲ್ಲೆಂಥ ಮಾತು?

ಆ ಓಲಗದ ಸದ್ದು ಹತ್ತಿರವಾದ ಹಾಗೆ ಜನಗಳ ಗಿಜಿಗಿಜಿ ಹೆಚ್ಚಿತು.

"ಓ ಅವರೆಲ್ಲಾ ಬಂದೇಬಿಟ್ಟರು, ಕರೆದೊಯ್ಯಲು—ಇನ್ನು ತಡಮಾಡುವ ಹಾಗೇ ಇಲ್ಲ. ನೀನು ಏಳಲೇಬೇಕಿನ್ನು! ಹೂಂ—ಏಳು" ಎಂದು ಇಂದಿಗೆ ಹೇಳಿದ.

ಇಂದಿಯನ್ನು ನೋಡುತ್ತಲೇ ಎಲ್ಲರೂ ಓಡಿಬಂದರು. ತಮ್ಮ ಒಡತಿಯ ಪಾದಗಳಿಗೆ ಬಿದ್ದರು.

"ನಮ್ಮನ್ನೆಲ್ಲಾ ಹರಸವ್ವಾ" ಎಂದು ಬೇಡಿಕೊಂಡರು. ಇಂದವ್ವ ಎಲ್ಲರಿಗೂ ಮುಗುಳ್ನಗೆಯ ಉತ್ತರ ಕೊಟ್ಟಳು.

ಚಂದಣ್ಣನೊಡನೆ ಇಂದವ್ವ ಮನೆಗೆ ಬಂದಳು.

ಎಷ್ಟೋ ದಿನದಿಂದ, ಇಂದವ್ವ ಬರುತ್ತಾಳೆ ಎಂದು ಕಾದಿದ್ದ ಆ ಜನ, ಚಂದಣ್ಣನೊಡನೆ ಬಂದ ಇಂದವ್ವನನ್ನು ನೋಡಿ ಸಮಾಧಾನಪಟ್ಟುಕೊಂಡರು.

ಮುತ್ತೈದೆಯರು ಆ ಗುಂಪಿನಲ್ಲೂ ದಾರಿ ಮಾಡಿಕೊಂಡು ಮುಂದೆ ಬಂದು ಇಂದವ್ವನಿಗೆ ಕುಂಕುಮ ಇಟ್ಟು ಆರತಿ ಬೆಳಗಿದರು!

...ಅಲ್ಲೇ ಅಚ್ಚರಿಯಿಂದ ನೋಡುತ್ತಾ ನಿಂತುಬಿಟ್ಟಿದ್ದ ಒಂದು ಮಗು ಮಾತ್ರ ತನ್ನ ತಾಯಿಗೆ "ಅಮ್ಮಾ...ಅಮ್ಮಾ...ಅದು ಪ್ರತಿಮೇನೇ! ಇಂದವ್ವನ ಪ್ರತಿಮೇನೇ!" ಎಂದಿತು.

## ಉಪಸಂಹಾರ

ಒಳಬಂದ ತಂಗಿ ಸ್ವರೂಪಾ, "ಹೂಂ...ಓದಿಬಿಟ್ಟೆ ತಾನೇ ಆ ಕತೇನಾ?" ಎಂತ ರೇಗಿಕೊಂಡೇ ಕೇಳಿದಳು.

"ನಿನ್ನ ಕತೆ ಅರ್ಥವೇ ಆಗೋದಿಲ್ಲ ಮಹರಾಯ್ತಿ. ಯಾವ ಪ್ರತಿಮೆ? ಆ ಇಂದವ್ವ ಎಲ್ಲಿಂದ ಬರ್ತಾಳೆ? ಯಾಕೆ ಬರ್ತಾಳೆ? ಅನ್ನೋದೇ ಗೊತ್ತಾಗೋಲ್ವಲ್ಲೇ!" ಎಂದೆ.

ಕಥೆಯ ವಿಷಯಕ್ಕೆ ಬಂದಾಗ ಅವಳ ಕೋಪ ಇಳಿಯಿತು.

"ಅದು ಹೇಗೇಂದ್ರೆ? ಪೆಚ್ಚೇ! ಅಷ್ಟು ಗೊತ್ತಾಗಲ್ವೇ? ಇಂದವ್ವ ತವರ್ಮನೆಗೆ ಹೋಗಿರ್ತಾಳೆ. ತಿರುಗಿ ಬರ್ತಾಳೆಂತ ಚಂದಣ್ಣ ಸಂಭ್ರಮದಿಂದ ಅವಳನ್ನು ಸ್ವಾಗತಿಸೋಕೆ ಹೋದಾಗ. ಅವಳು ಇದ್ದಕ್ಕಿದ್ದಂತೆ ಕಾಲರಾದಿಂದ ಸತ್ತಳೆಂಬ ವಾರ್ತೆ ಬರುತ್ತೆ. ಚಂದಣ್ಣ ತುಂಬಾ ದುಃಖಪಡ್ತಾನೆ. ಆದ್ರೆ ಅವಳನ್ನು ಅಲ್ಲಿಗೇ ಮರೆಯೋಲ್ಲ ಅವನು. ಕಡೆವರೆಗೂ ಅವಳ ನೆನಪಿನಲ್ಲೇ ಕಾಲ ಕಳೀಬೇಕೆಂದಿರ್ತಾನೆ. ಅಂಥ ಅಮರಪ್ರೇಮಕ್ಕೆ ಸ್ಮಾರಕವಾಗಿ ಆ ಊರಿನ ಶಿಲ್ಪಿ ರಾಜಾಚಾರಿ ಆಕೆಯ ಪ್ರತಿಮೆ ಮಾಡಿ ತಂದುಕೊಡುತ್ತಾನೆ. ಅಲ್ಲಿಂದ ಮುಂದಿನ ಕತೆ ಇದು..."

ಅದೇತಾನೇ ಓದಿದ ಆ ಮುಂದಿನ ಕತೆಯನ್ನು ನೆನೆಸಿಕೊಂಡೆ. ಸ್ವರೂಪ ನನ್ನನ್ನು ಹಿಡಿದಲುಗಿಸಿ, "ನಿಜವಾಗ್ಲೂ ನಡೆದ ಕತೇನೇ ಇದೂ...ಅವತ್ತು ಅಮ್ಮನ ಜೊತೆ ಹಳ್ಳಿಗೆ ಹೋದಾಗ...ಅಲ್ಲಿ ಯಾರೋ ಹೇಳಿದ್ರು...ಅಂದ್ರೆ ಹಿಂದಿನ ಕಾಲದ್ದು ಅನ್ನೂ. ಆದ್ರೂ...ಚಂದಣ್ಣ ಯಾವ ಷಹಜಹಾನ್‌ಗೆ ಕಡಿಮೆ ಹೇಳು ?" ಎಂದಳು.

ಷಹಜಹಾನ್—ಚಂದಣ್ಣನ ಸಾಮ್ಯದ ಬಗೆಗೇ ಯೋಚಿಸುತ್ತ ಕುಳಿತ ನನಗೆ, ಹೊತ್ತು ಹೋದುದೇ ಗೊತ್ತಾಗಲಿಲ್ಲ.

ಜನವರಿ, ೧೯೫೨

# ಮಣ್ಣುದಿಬ್ಬದ ಮೇಲೆ

ಮಣ್ಣುದಿಬ್ಬದ ಮೇಲಿನಿಂದ ಸರಸರನೆ ಕೆಳಗಿಳಿದು ಓಡಿಬಂದಳು ಆ ಪುಟ್ಟ ಹುಡುಗಿ. ಅವಳ ಬಲಗೈಲಿದ್ದ ಒಡಕು ಬಳೆಗಳು ಜಣ ಜಣ ಸದ್ದು ಮಾಡಿದುವು. ಕೊರಳಲ್ಲಿದ್ದ ಕೆಂಪು ಸರಗಳು ಒಂದಕ್ಕೊಂದು ತಾಗಿ ಸಳಸಳ ಎಂದುವು. ಮುದ್ದೆಯಾದ ಆ ಚಿಂದಿ ಲಂಗವನ್ನು ಮತ್ತಷ್ಟು ಬಿಗಿಯಾಗಿ ಕಟ್ಟಿಕೊಂಡು, ಹುಡುಗಿ ತಲೆಗೆ ಎರಡೂ ಕೈ ಆನಿಸಿ ಆಕಾಶದ ಕಡೆಗೆ ಕತ್ತೆತ್ತಿ ನೋಡಿದಳು.

ಆಕಾಶವನ್ನು ಮೋಡ ಮುಸುಕಿತ್ತು. ಬೆಳಗಿನ ಸಮಯವಾದರೂ ಸೂರ್ಯನ ಸುಳಿವಿರಲಿಲ್ಲ. ''ಶೀಲೀ...ಶೀಲೀ...'' ಎಂದು ಮಣ್ಣುದಿಬ್ಬದ ಮೇಲಿನಿಂದ ಒಬ್ಬ ಹುಡುಗ ಕೂಗ ಹತ್ತಿದ. ಹುಡುಗಿ ''ಬಾ ಸೋನ್ಯಾ'' ಎಂದು ಮಾರು ತ್ತರಿಸಿದಳು. ಒಂದು ಕಲ್ಲನ್ನು ಆ ಹುಡುಗನ ಕಡೆಗೆ ಎಸೆದಳು, ತಮಾಷೆಗೆ. ಹುಡುಗ ಗುಡಿಸಲಿಗೊರಗಿಸಿಟ್ಟಿದ್ದ ಒಂದು ಪುಟ್ಟ ಗುದ್ದಲಿ, ಚಿಕ್ಕ ಮಕ್ಕರಿ ಎತ್ತಿಕೊಂಡು ಕೆಳಗಿಳಿದು ಬಂದ.

''ಶೀಲೀ...ಕೈತತ್ತಾ'' ಎಂದ. ಆವನ ಕೈ ತನ್ನ ಹೆಗಲ ಮೇಲಿರಿಸಿಕೊಂಡು, ಆ ಕುರುಡ ಹುಡುಗ ಸೋನ್ಯಾನನ್ನು ನಡೆಸಿಕೊಂಡು, ಶೀಲಿ ಹೊರಟಳು.

ರಂಗೋಲಿಯ ಗುಡ್ಡದ ಬಳಿಗೆ ಬಂದಾಗ, ಸೋನ್ಯಾ ಮಕ್ಕರಿ ಕೆಳಗೆ ಹಾಕಿ ಅಗೆಯತೊಡಗಿದ. ಅವನು ಅಗೆದು ಹಾಕಿದ ಹಾಗೆ, ಶೀಲಿ ರಂಗೋಲಿಯನ್ನು ಮಕ್ಕರಿಯೊಳಗೆ ತುಂಬಿದಳು. ಅಷ್ಟು ಹೊತ್ತಾದರೂ ಸೂರ್ಯ ಹುಟ್ಟಲೇ ಇಲ್ಲ. ಆಕಾಶದ ಕಡೆಗೇ ಯೋಚನಾಪೂರ್ಣವಾಗಿ ನೋಡುತ್ತಾ ಶೀಲಿ ''ಮಳೀ ಬರೊ ಹಾಂಗದೆ ಸೋನ್ಯಾ!'' ಎಂದಳು.

ಹರಿದ ಅಂಗಿಯ ಚುಂಗಿನಿಂದ ಮುಖ ಒರೆಸಿಕೊಂಡು, ರಂಗೋಲಿಯ ಮಕ್ಕರಿ ಹೊತ್ತು ಸೋನ್ಯಾ ಹಿಂದೆ ಹೊರಟ. ಅಣ್ಣನ ಕೈ ತನ್ನ ಹೆಗಲ ಮೇಲಿಟ್ಟುಕೊಂಡು, ''ರಂಗೋಲೀವ್ವಾ...ರಂಗೋಲೀ'' ಎಂದು ಕಿರಿಚುತ್ತಾ, ಬರಿ ಎದೆಯ ಮೇಲೆ ಬಿದ್ದಿದ್ದ ಕೆಂಪಿನ ಸರದೊಡನೆ ಆಟವಾಡುತ್ತಾ, ಶೀಲಿ ಮುಂದೆ ಹೊರಟಳು.

ರಂಗೋಲಿ ಮಾರಾಟವಾಗಲಿಲ್ಲ. ''ಒಟ್ಟೆ ಹಸೀತದ್ಲಾ!'' ಎಂದಳು ಶೀಲಿ. ಸೋನ್ಯಾ ಮಾತನಾಡಲಿಲ್ಲ. ಶೀಲಿಗಿಂತ ಮೂರು ವರ್ಷ ದೊಡ್ಡವನು ಆತ.

ತನ್ನ ಎಂಟು ವರ್ಷದ ಅವಧಿಯಲ್ಲಿ ಹಸಿವು, ಜೀವನದ ಕಹಿ, ಅನುಭವಿಸಿ–ಅನುಭವಿಸಿ ಅವನ ಮೈ-ಮನ ಕಲ್ಲಾಗಿ ಹೋಗಿದ್ದುವು.

ಆತ ಮಾತು ಮರೆಸಿ, "ಶೀಲೀ! ನಂಗೆ ಕಣ್ಣಿದ್ದಿದ್ರೆ ನಿಂಗೆ ಹೆಂಗೆ ಅನಿಸ್ತದೆ?" ಎಂತ ಕೇಳಿದ.

"ಓ...ಭೇಷಕ್!" ಎಂದು ಚಪ್ಪಾಳೆ ಹೊಡೆದಳು, ಶೀಲಿ. ಆದ್ರೆ ಕಣ್ಣೆಲ್ಲಿ ಬರ್ತವೋ ನಿಂಗೆ?"

ಹಾಗೇ ಸಾಗಿದರು ಅವರು ಬೀದಿಗುಂಟ.

ಕಡೆಗೊಬ್ಬ ಮನೆಯಾಕೆ ಕೂಗಿ ಕರೆದಳು. ಮಕ್ಕರಿಯಲ್ಲಿದ್ದ ರಂಗೋಲೆಯನ್ನೆಲ್ಲಾ ಸುರಿದು, ಸೋನ್ಯಾ "ಒಂದು ಮುದ್ದೆ ಇಟ್ಟು ಇಕ್ಕಿಬಿಡ್ರವ್ವಾ ಸಾಕು!" ಎಂದ. ಮನೆಯಾಕೆ ಅವನ ಕುರುಡು ಕಣ್ಣು ನೋಡಿದಳು. ಆಸೆಯ ಕಣ್ಣುಗಳಿಂದ ತನ್ನನ್ನೇ ದಿಟ್ಟಿಸಿ ನೋಡುತ್ತಿದ್ದ ಆ ಕಪ್ಪು ಹುಡುಗಿ ಶೀಲಿಯನ್ನು ನೋಡಿದಳು. ಏನು ಅನಿಸಿತೋ ಏನೋ, ಒಂದು ಮುದ್ದೆ ಹಿಟ್ಟು ತಂದುಕೊಟ್ಟಳು.

ಶೀಲಿ ಆ ಮನೆಯಿಂದ ಹೊರಬರುತ್ತಾ, "ಅಣ್ಣಾ—ತಿಂದ್ಬಾಕಾನಾ?" ಎಂತ ಕೇಳಿದಳು. ಇಬ್ಬರೂ ಕಾಂಪೌಂಡಿನ ನೆರಳಲ್ಲಿ ಕುಳಿತರು. ಹಸಿದ ಹೊಟ್ಟೆ ಒಂದು ಗಳಿಗೆಯಲ್ಲೆ ಹಿಟ್ಟನ್ನೆಲ್ಲಾ ಕಬಳಿಸಿತು. ಸೋನ್ಯಾ ಗೋಡೆಗೊರಗಿ ತನ್ನ ಕುರುಡು ಕಣ್ಣುಗಳ ಮೇಲೆ ಕೈಯಾಡಿಸುತ್ತಾ ಕುಳಿತ. ಹೊಟ್ಟೆ ತುಂಬಿದ ಶೀಲಿ, ಸಂತೋಷದಿಂದ ಅಲ್ಲೇ ಉರುಳಿಕೊಂಡಳು, ಆಕಾಶದ ಕಡೆಗೆ ನೋಡುತ್ತಾ. ಯಾವುದೋ ಅಸ್ಪಷ್ಟ ಗೀತದ ಅಲೆ ಹರಿದು ಬರುತ್ತಿತ್ತು ಅವಳ ಹೃದಯದಿಂದ.

ಪಟ್‌ಪಟ್ ಎಂತ ಮಳೆ ಹನಿಗಳು ಬಿದ್ದುವು.

"ಮಳೀ ಬಂತ್ಕಲ್ಲಾ ಶೀಲೀ!" ಎಂದು ಸೋನ್ಯಾ ಕೂಗಿಕೊಂಡ. ಮನೆಯಲ್ಲಿ ತಾವು ತರುವ ತಿಂಡಿಗಾಗಿ ಕಾದಿದ್ದ ರುದ್ರರೂಪಿ ತಾಯಿಯನ್ನು ನೆನೆದು, ಇಬ್ಬರೂ ನಡುಗಿದರು. ಶೀಲಿ ಲಗುಬಗೆಯಿಂದ ಮೇಲೆದ್ದು ಸೋನ್ಯಾನ ಕೈ ಹಿಡಿದಳು. ಇಬ್ಬರೂ ಸರಸರನೆ ಮನೆಯ ಕಡೆ ಹೊರಟರು.

ಅವರು ದಿಬ್ಬ ಸಮೀಪಿಸುವ ಹೊತ್ತಿಗೆ ಅವರವ್ವ ಗುಡಿಸಲ ಬಾಗಿಲಿನಲ್ಲಿ ನಿಂತು ಬಾಯಿಗೆ ಕೈಯಿಟ್ಟುಕೊಂಡು, "ಓ...ಸೋನ್ಯಾ...ಶೀಲೀ..." ಎಂತ

ಒಂದೇ ಉಸಿರಿನಲ್ಲಿ ಒರಲುತ್ತಿದ್ದಳು. "ಅಪ್ವಾ...." ಎಂದು ಎಳೆಯರಿಬ್ಬರೂ ಮರುಧ್ವನಿ ಕೊಟ್ಟರು. ದಡದಡನೆ ಅವರು ದಿಬ್ಬ ಹತ್ತಿ ಬರುವ ಹೊತ್ತಿಗೆ ಮಳೆ ಜೋರಾಯಿತು.

"ಏನು ಸಿಕ್ಕ್ಯಾಣೆಲ್ಲೆವ್ವಾ!" ಎಂದು ಸೋನ್ಯಾ ಅಳುಮುಖದಿಂದ ತಾಯಿಗೆ ಹೇಳಿದ.

ಗುಡಿಸಲು ತಟಕಿ ಮುಂದೆ ಮುಚ್ಚಿ, ಒಳಗ್ಹೋದಳು ತಾಯಿ. ಬಿಸಿಲಿನ ಹೊತ್ತಿನಲ್ಲಿ ಆಯ್ದು, ಗುಡ್ಡೆ ಮಾಡಿದ್ದ ತರಗೆಲೆ-ಕಡ್ಡಿ ಹೊತ್ತಿಸಿ ಉರಿ ಮಾಡಿದಳು. ನಡುಗುತ್ತಾ ಕೈ ಮೈ ಮುದುರಿಕೊಂಡು ಮೂವರೂ ಉರಿಯ ಸುತ್ತ ಕುಳಿತರು.

ರೊಯ್ ರೊಯ್ ಎಂತ ಗಾಳಿ ಬೀಸಿದ ಏಟಿಗೆ ಗುಡಿಸಲೇ ಹಾರಿ ಹೋಗುವುದೇನೋ ಎನಿಸಿತು ಅವರಿಗೆ. ಆದರೆ ಅಂಥ ಗಾಳಿಯನ್ನು ಆ ಗುಡಿ ಸಲು ಆದೆಷ್ಟು ಸಾರಿ ಇದಿರಿಸಿತ್ತೋ! ಚಳಿ ಜಾಸ್ತಿಯಾಗಿ ಅವರು ಆ ಉರಿ ಯಲ್ಲೂ ನಡುಗಿದರು. ಅಷ್ಟರಲ್ಲಿ ಗುಂಡಿಸಲಿನ ತಟಕಿ ಮುಂದೆ ಮಾಡಿ ನಾಯಕ ಒಳಗೆ ಬಂದ. ಅವನು ಹೊದೆದಿದ್ದ ಒಂದೇ ಒಂದು ದುಪಟಿ ಪೂರ್ಣ ನೆನೆದು ಹೋಗಿತ್ತು. ಅದನ್ನು ಗುಡಿಸಲಿನ ಮಾಡಕ್ಕೆ ಸಿಕ್ಕಿಸಿ, ನೆನೆದುಹೋದ ಅರ್ಧ ಪಂಚೆಯಲ್ಲೇ ಆತನೂ ನಡುಗುತ್ತಾ ಕುಳಿತುಕೊಂಡ ಉರಿಯ ಮುಂದೆ.

"ಏನನ್ನಾ ತಂದ್ಯಾ...? ನಾವೆಲ್ಲಾ ಸಾಯ್ಬೇಕೂಂತ ಮಾಡಿದ್ಯೇನು?" ಎಂದು ತಾಯಿ ಆರ್ಭಟಿಸಿದಳು. ನಾಯಕ ಮೊದಲಿಗಿಂತ ಮುದುರಿ, ಜೋಲು ಮೋರೆ ಹಾಕಿಕೊಂಡು ಕುಳಿತ. ಆದುವರೆಗೂ ಸುಮ್ಮನಿದ್ದ ಶೀಲಿ "ಅಪ್ವಾ.... ರಂಗೋಲಿ ಕೊಡಾಕೋಗ್ತಿವಲ್ಲೇ ಅಲ್ಲಿ ಒಳ್ಳೆ ಶ್ಯಾಲೆ ಉಟ್ಟಿದ್ರು ನೋಡ್ಲೇ!" ಎಂದಳು. ಮೊದಲೇ ಕೋಪದಿಂದ ಆರ್ಭಟಿಸುತ್ತಿದ್ದ ತಾಯಿ, ರಪ್ ರಪ್ ಎಂದು ಶೀಲಿಯ ಬೆನ್ನಮೇಲೆ ಗುದ್ದಿದಳು. ಮುಳುಮುಳು ಅಳುತ್ತಾ ಶೀಲಿ ಅಲ್ಲೇ ಬಿದ್ದುಕೊಂಡಳು....ನಿದ್ದೆ ಬಂದುಬಿಟ್ಟಿತು. ಕುರುಡ ಹುಡುಗ ಸೋನ್ಯಾ ಉರಿಯ ಕಡೆ ನೋಡುತ್ತಾ "ಉರಿ ಯಾವ ಬಣ್ಣ ಇರಬಹುದು?" ಎಂದು ಲೆಕ್ಕ ಹಾಕುತ್ತಾ ಕುಳಿತ.

ಖಟ ಖಟಲ್ ಎಂದು ಮಿಂಚು ಹೊಡೆಯಿತು. ರೊಯ್ ರೊಯ್ ಎಂದು ಗಾಳಿ ಮತ್ತೆ ವೇಗವಾಗಿ ಬೀಸಿತು. ಜೋ ಎಂದು ಜೋರಾಗಿ ಮಳೆ

ಬರಹತ್ತಿತು. ಆಗಲೇ ಯಾರೋ ಕಿರಿಚಿಕೊಳ್ಳುತ್ತಿದ್ದರು "ಯವ್ವಾ..ಒಯ್ತಲ್ಲೇ ಯವ್ವಾ..." ಅದರ ಜೊತೆಗೆ ಅಳುವ ಧ್ವನಿ. ಮರುಗಳಿಗೆಯೇ ಪಕ್ಕದ ಮನೆಯಾಕೆ ವಾಗೀಶಿಯ "ಇತ್ಲಾ ಕಡೆ ಸುಳೀಬ್ಯಾಡ್ರಿ!" ಎಂಬ ಗದರಿಕೆಯ ಸ್ವರ.

ನಾಯಕ ಗುಡಿಸಲಿನ ಬಾಗಿಲು ತೆರೆದುಕೊಂಡು ಹೊರಗೆ ಹೋದ. ಮರು ನಿಮಿಷದಲ್ಲೇ ಆತ, ಇಬ್ಬರು ಹೆಂಗಸರು ಮತ್ತು ಒಬ್ಬ ಮುದುಕನೊಂದಿಗೆ ಒಳಗೆ ಬಂದ.

"ಗುಡ್ಲು ಕುಸೀತಂತ್ಯೇ" ಎಂದು, ಬಿರುಗಣ್ಣು ಬಿಟ್ಟ ಹೆಂಡತಿಗೆ ಆತ ಸಮಾಧಾನ ಹೇಳಿದ. ಬಂದವರು ಬೆಂಕಿಯ ಸುತ್ತಲೂ ಕುಳಿತರು. ಆದರೂ ಚಳಿ ಹೋಗಲಿಲ್ಲ. ಗುಡಿಸಲಿನ ನಾಲ್ಕು ಕಡೆಯಿಂದಲೂ ಸೋರಿ ಹರಿದು ಬರುತ್ತಿದ್ದ ನೀರು ಸ್ವಲ್ಪ ಸ್ವಲ್ಪವಾಗಿ ಬೆಂಕಿಯನ್ನು ಆರಿಸುತ್ತಿತ್ತು.

"ಆ ವಾಗೀಶಿ ಮನಸೀ ಮಾತ್ರಲ್ಲ. ಗುಡ್ಲು ಕುಸೀತಂತ ಓದ್ರೆ, ಹೋಗ್ಲೇ–ಹೋಗ್ಲೇ ಎಂತಬ್ಬರಿಸಿಬಿಟ್ಳು, ಎಂತಾ ಗತಿ ಬರ್ತದೋ ಬರ್ತದ್ಲ!" ಎಂದು ಬಂದಾಕೆ ಹೇಳಿದಳು.

"ಅನ್ನಿಲ್ದೆ ಸಾಯ್ತಾ ಇರೋಣಾಗಡೆ. ಶ್ಯಾಲೆ ಉಟ್ಕೊಂಡು ಈಕಿ ಮೆರೆದ್ಲೂ ಮೆರೆದ್ದೇ!" ಎಂದು ತಾಯಿ ವಾಗೀಶಿಯನ್ನು ದೂರಿದಳು.

ಆ ವಾಗೀಶಿ ಆರ್ಮುಗಂನ ಹೆಂಡತಿ. ಇವರದೇ ಒಂದು ಪುಟ್ಟ ಕತೆ.

'ದಯಾನಂದ ಫ್ಲೋರ್‌ಮಿಲ್ಸ'ಂತೆ ಅದು. ಅಲ್ಲಿ ಆರ್ಮುಗಂ ಕೆಲಸಕ್ಕೆ ಹೋಗುತ್ತಿದ್ದ. ಗೋಧಿ, ಅಕ್ಕಿ, ರಾಗಿ, ಜೋಳ ಯಂತ್ರಕ್ಕೆ ಹಾಕಿ ಬೀಸಿಕೊಡುವ ಕೆಲಸ.

"ಬಾಳ ಬೇಸ್ರದ ಕೆಲ್ಸ!" ಎಂದು ಅವನು ಯಾವಾಗಲೂ ಗೊಣಗುತ್ತಿದ್ದ.

ಬೆಳಗ್ಗೆ ಏಳು ಗಂಟೆಗೆಲ್ಲಾ ಆರ್ಮುಗಂ ಮಿಲ್ಲಿನಲ್ಲಿರಬೇಕು. ಯಜಮಾನರ ಆಜ್ಞೆ ಹಾಗೆ. ಇದ್ದದ್ದೋ ಇಲ್ಲದ್ದೋ ಇಷ್ಟು ತಿಂದು ಆರ್ಮುಗಂ ಕೆಲಸಕ್ಕೆ ಹೊರಡುತ್ತಿದ್ದ; ಬೆಳಗಿನಿಂದ ಸಂಜೆಯವರೆಗೆ ಒಂದು ಗಳಿಗೆ ಬಿಡುವಿಲ್ಲದ ಹಾಗೆ ಆ ಯಂತ್ರದ ಜೊತೆ ತಾನೂ ಯಂತ್ರವಾಗಿ ದುಡಿಯುತ್ತಿದ್ದ.

ಒಂದೊಂದು ಸಾರೆ ಆರ್ಮುಗನಿಗೆ ಅನಿಸುತ್ತಿತ್ತು. ಈ ಜನಕ್ಕೆ ಬಿಡುವೇ ಇಲ್ಲವೇನೋ ಎಂತ. ಇವರೆಲ್ಲಾ ಇಲ್ಲಿಗೇ ಯಾಕೆ ಬರಬೇಕು? ಬೇರೆ ಕಡೆಗೆ

ಯಾಕೆ ಹೋಗಬಾರದು? ಎಂತಲೂ ಯೋಚಿಸುತ್ತಿದ್ದ.

ಅಷ್ಟು ದುಡಿತಕ್ಕೆ ದಿನಕ್ಕೆ ಹತ್ತಾಣೆ ಕೂಲಿ. ಮೂರು ಜನದ ಸಂಸಾರ ಏನು ತಿಂದು ಬದುಕಬೇಕು? ಆದರೂ ಅವರು ಬದುಕುತ್ತಲೇ ನಡೆದಿದ್ದರು.

ವಾಗೀಶಿ ಜಂಭದ ಹೆಂಗಸು. ತಿನ್ನಲಿಕ್ಕಿಲ್ಲದಿದ್ದರೂ ಬಿಂಕದ ಆಸೆ ಅವಳದು. ಮಣ್ಣುದಿಬ್ಬದ ಮೇಲಿರುವ ಇತರ ಹೆಂಗಸರನ್ನು ಕಂಡರೆ ಅವಳಿಗೆ ಸಹನೆಯಿಲ್ಲ. ತಾನು ಅವರಿಗೆ ಯಾವ ವಿಧದಲ್ಲೂ ಮೇಲಿಲ್ಲವಲ್ಲಾ ಎಂಬ ಹೊಟ್ಟೆಕಿಚ್ಚು. ಆರ್ಮುಗಂ ಮಗುವಿನೊಡನೆ ಆಡುತ್ತಿದ್ದಾಗೊಮ್ಮೆ, ಬೇರೆ ಎಲ್ಲಾದ್ರೂ ಹೋಗೋಣ — ಎಂದಳು. ಅದು ಬಿಟ್ಟರೆ ಬೇರೆ ಸ್ಥಳವಿಲ್ಲ — ಎಂದು ಆರ್ಮುಗನಿಗೆ ಗೊತ್ತು. ಆದರೂ 'ಹ್ಞೂ' ಎಂದ. ಆದರೆ ಆ 'ಹ್ಞೂ' ಎಂದಿಗೂ ತುಂಬಿ ಬರಲಿಲ್ಲ.

ಹೆಂಡತಿ ಸುಖವಾಗಿರಬೇಕು ಎನ್ನುವುದು ಅವನ ಆಸೆ. ಆ ಪುಟ್ಟ ಮಗು ರಾಧೀ ನಗುನಗುತಾ ತುಂಬಿ ಬೆಳೆಯಬೇಕು ಎನ್ನುವುದು ಅವನ ನಿತ್ಯದ ಹಂಬಲ.

ಒಮ್ಮೆ ವಾಗೀಶಿ ಹಟ ತೊಟ್ಟಿದ್ದಳು. "ಶ್ಯಾಲೆ ತಂದ್ಕೊಡು" ಎಂತ. ಅದಕ್ಕಾಗಿ ಗಂಡ ಹೆಂಡಿರಿಬ್ಬರೂ ಒಂದು ವಾರ ಉಪವಾಸ ಬಿದ್ದರು. ಎಲ್ಲೋ ಬಚ್ಚಿಟ್ಟಿದ್ದ ನಾಲ್ಕು ರೂಪಾಯಿ ಗಂಡನ ಕೈಗೆ ತಂದುಕೊಟ್ಟಳು ವಾಗೀಶಿ. ಹಾಗೆ ಹೊಸ ಸೀರೆ ಬಂತು.

ವಾಗೀಶಿ ಅದನ್ನುಟ್ಟು ಓಣಿಯಲ್ಲೆಲ್ಲಾ ಓಡಾಡಿದಳು. ಮಾತಾಡಿಸಿದ ನಾಯಕನ ಹೆಂಡತಿಯ ಕಡೆ ನೋಡಿ 'ಇಶೀss' ಎಂದುಕೊಂಡು ಮಗುವನ್ನು ಕರೆದುಕೊಂಡು ಬಂದುಬಿಟ್ಟಳು.

ಅದು ಅವಳ ಕತೆ. ಆರಿಹೋಗುತ್ತಿದ್ದ ಬೆಂಕಿಯ ಮುಂದೆ ಕುಳಿತು ಚಳಿ ಕಾಯಿಸುತ್ತಿದ್ದವರ ಮಾತಿಗೆ ವಾಗೀಶಿ ವಸ್ತುವಾದಳು.

"ಅವಳಿಗೊಳ್ಳೇದಾಗಾಕಿಲ್ಲ. ದೇವರವ್ವೆ" ಎಂದು ಬಂದಾಕೆಯೊಬ್ಬಳು ದನಿಗೂಡಿಸಿದಳು.

...ಮಧ್ಯಾಹ್ನದ ಹೊತ್ತಿಗೆ ಮಳೆ ಪೂರ್ತಿ ನಿಂತುಹೋಯಿತು. ಅದು ವರೆಗೂ ಮರೆಯಾಗಿದ್ದ ಸೂರ್ಯ ನೆತ್ತಿಯ ಮೇಲೆ ಕಾಣಿಸಿಕೊಂಡನು. ರಣರಣ ಬಿಸಿಲು ಹೊಡೆಯಿತು. ಮುದುರಿ ಕುಳಿತಿದ್ದವರೆಲ್ಲಾ ಎದ್ದು ಹೊರಗೆ ಬಂದರು.

ನಾಯಕ ಆಕಾಶದ ಕಡೆಗೆ ನೋಡಿದ. ದೂರದಲ್ಲಿ ಮೂಡಿದ ಬಣ್ಣ ಬಣ್ಣದ ಕಾಮನಬಿಲ್ಲು ನೋಡಿ, "ಇನ್ನ ಮಳೆ ಬರೋದಿಲ್ಲಾಂತ ಕಾಣಿಸ್ತದೆ" ಎಂದ.

ಶೀಲಿ ಎದ್ದು ಕುಳಿತುಕೊಂಡಳು. ಕಣ್ಣು ಹೊಸಗಿಕೊಂಡು ಹೊರಗೆ ಬಂದಳು. ಗುಡಿಸಲಿನ ಮುಂದೆ ನಿಂತಿದ್ದ ನೀರು ಅವಳನ್ನು ಕೂಗಿ ಕರೆಯಿತು. ಆ ಕೊಚ್ಚೆ ನೀರನ್ನು ಕೈತುಂಬಾ ತೆಗೆದುಕೊಂಡು ಕೆಳಗೆ ಬಿಟ್ಟಳು. ಕಾಲನ್ನು ನೀರಿನಲ್ಲಿ ಆಡಿಸುತ್ತಾ ತನ್ನಾಟದಲ್ಲೇ ಮಗ್ನಳಾಗಿ ಹೋದಳು.

ನಾಯಕ ಅತ್ತಿತ್ತ ನೋಡಿದ. ಬಾಯಲ್ಲಿ ತುಂಬಿಟ್ಟುಕೊಂಡಿದ್ದ ಅಡಕೆಲೆ ಅಗಿದು ಉಗಿದಾದಮೇಲೆ, ಮೈಮುರಿದುಕೊಂಡು ಆಕಳಿಸಿದ. ಮುರಿದು ಹೋದ ಗುಡಿಸಲನ್ನು ಎತ್ತಿ ಸರಿಪಡಿಸುವವರನ್ನು ನೋಡಿ ಅವನಿಗೆ ಖುಶಿ ಬಂತು. ಒಳಗೆ ನುಗ್ಗಿ ಗುಡಿಸಲ ಸೂರಿಗೆ ಸಿಗಿಸಿದ್ದ ದುಂಪಟಿ ತೆಗೆದು ತಲೆಗೆ ಕಟ್ಟಿಕೊಂಡ.

"ಎಲ್ಲಿಗ್ಹೊಂಟೀ ?" ಎಂದು ಕಸ ಗುಡಿಸುತ್ತಿದ್ದ ತಾಯಿ ಕೂಗಿ ಕೇಳಿದಳು. ಅವನು ಮುಸಿಮುಸಿ ನಕ್ಕು "ಗುಡ್ಲು ಸರಿಮಾಡ್ತವ್ರೆ, ನೋಡ್ಕೊಂಬರ್ತೀನ್ಲೆ!" ಎಂದು ಸರಸರನೆ ಹೆಜ್ಜೆಹಾಕಿ ಹೊರಟ.

"ಮನೀ ಕೆಲ್ಸ ರೋಟು ಮಾಡ್ದಿದ್ರೂ ಇವರಿಗೆ ಬ್ಯಾರೆಯೋರ್ ಕೆಲ್ಸಾಂದ್ರೆ ಪರಾಣ" ಎಂದು ತಾಯಿ ಗೊಣಗಿಕೊಂಡಳು. ಮೂಲೆಯಲ್ಲಿ ಯಾವುದೂ ಅರಿಯದೆ ಮುಖ ಮುಚ್ಚಿಕೊಂಡು ಕುಳಿತಿದ್ದ ಸೋನ್ಯಾನನ್ನು ನೋಡುತ್ತಲೇ ಅವಳ ಕಣ್ಣು ಹನಿಗೂಡಿತು.

"ಮಾರವ್ವಾ—ನಿಂಗೆಂದು ದಯಾ ಬರ್‍ತದವ್ವಾ?" ಎಂದು ನಿಟ್ಟುಸಿರಿಟ್ಟಳು.

ಸ್ವಲ್ಪ ಹೊತ್ತಿನಲ್ಲೇ ಕುಸಿದುಹೋದ ಗುಡಿಸಲಿನ ಬಳಿ ನಾಲ್ಕಾರು ಜನ ಸೇರಿಬಿಟ್ಟರು. ನಾಯಕ ಮಣ್ಣು ಅಗೆದುಕೊಟ್ಟ. ಕೊನೆಯ ಮನೆಯ ಹುಡುಗ ಬಾಳ್ಯಾ ಮಣ್ಣು ಕಲೆಸಿದ. ಮನೆ ಮುರಿದ ಅಜ್ಜನ ಸೊಸೆ ಮಣ್ಣು ಹೊತ್ತಳು. ಸೊಸೆಯ ಗಂಡ ಮಣ್ಣಿನ ಗೋಡೆ ಕಟ್ಟಿದ. ಐದಡಿ ಎತ್ತರದ ಗೋಡೆ ಕಟ್ಟಿ, ಅದರ ಮೇಲೆ ಗುಡಿಸಲ ಮಾಡು ಹೊದೆಸುವ ಯತ್ನಮಾಡಿದರು. ಅಷ್ಟೇ ಅವರ ಮನೆ, ಅರಮನೆ.

ಇಷ್ಟೆಲ್ಲಾ ನಡೆದಿದ್ದಾಗಲೂ ಹುಡುಗಿ ಶೀಲಿ ಆಡುತ್ತಲೇ ಇದ್ದಳು. ಯಾವ

ಯೋಚನೆಯೂ ಇಲ್ಲದೆ, ಹಕ್ಕಿಯಂತೆ ಹಾಡುತ್ತಾ, ನೀರಿನ ಜೊತೆ ಅವಿತ ಉತ್ಸಾಹದಿಂದ ಆಡುತ್ತಲೇ ಇದ್ದಳು.

"ಏಯ್!" ಎಂದು ಯಾರೋ ಕೂಗಿದ ಸದ್ದಾಗಿ, ಕೂದಲು ಹಿಂದೆ ಸರಿಸಿ ತಿರುಗಿ ನೋಡಿದಳು. ದಿಬ್ಬಕ್ಕೆ ಹತ್ತು ಗಜ ದೂರದಲ್ಲಿ ಒಬ್ಬಾತ ಬರುತ್ತಿದ್ದುದು ಕಾಣಿಸಿತು. ಆತ ಹತ್ತಿರ ಹತ್ತಿರ ಬಂದಹಾಗೆಲ್ಲಾ ಕಣ್ಣರಳಿಸಿ ನೋಡಿದಳು ಮೊದಲು ಥಳಥಳಿಸುತ್ತಿದ್ದ ಜರೀಪೇಟ ಕಂಡಿತು. ಆಮೇಲೆ ಕಂಡಿದ್ದು ಗಿರಿಜಾ ಮೀಸೆ. ಅನಂತರ ಮುಕಮಲ್ಲಿನ ಕಪ್ಪು ಕೋಟು. ಆತ ಹತ್ತಿರ ಹತ್ತಿರ ಬಂದ. ದಿಬ್ಬದ ಸುತ್ತಲೂ ನಿಂತಿದ್ದ ನೀರಿನಲ್ಲಿ ಜೋಪಾನವಾಗಿ ಕಾಲಿಡುತ್ತಾ ಮಲ್ಲಿನ ಪಂಚೆ ಎತ್ತಿಕೊಂಡು ನಡೆದು ಬರುತ್ತಿದ್ದ ಆತ. ದಿಬ್ಬ ಸಮೀಪಿಸುತ್ತಲೇ "ಏಯ್! ಹುಡುಗಿ!" ಎಂದು ಕೂಗಿ ಶೀಲಿಯ ಕಡೆ ತಿರುಗಿ ಕೈ ಮಾಡಿ ಕರೆದ.

ಶೀಲಿ ಒಂದು ನಿಮಿಷ ನಿಂತು ನೋಡಿ, ದಿಬ್ಬದ ಕೆಳಗಿಳಿದು ಬಂದಳು.

ಅವನ ಕಾಲಿನಿಂದ ತಲೆಯವರೆಗೆ ದಿಟ್ಟಿಸಿ ನೋಡಿದಳು.

ಅವನ ಬೆಳ್ಳಗಿನ ಪಂಚೆ ಅಲ್ಲಲ್ಲಿ ಕೆಂಪಾಗಿತ್ತು, ಕೊಚ್ಚೆ ತಾಗಿ, ಬಲಗೈಯಲ್ಲಿ ಛತ್ರಿಯೊಂದನ್ನು ಊರಿ ಹಿಡಿದಿದ್ದ. ಆ ಕೈಯ ಕಡೆ ಅವಳ ದೃಷ್ಟಿ ಹೋಯಿತು.ಐದು ಬೆರಳುಗಳಲ್ಲೂ ಹೊಳೆಯುತ್ತಿದ್ದ ಉಂಗುರಗಳನ್ನು ನೋಡಿ ಅವಳಿಗೇನೇನೋ ಅನ್ನಿಸಿತು. ಅಂಥ ದೊಡ್ಡ ಮನುಷ್ಯನನ್ನು ಹೇಗೆ ಮಾತಾಡಿಸ ಬೇಕೆಂದು ಶೀಲಿಗೆ ತೋರಲಿಲ್ಲ. ಕಾದು ನೋಡಿದರೂ ಆತ ಏನೂ ಮಾತಾಡ ಲಿಲ್ಲ. ಉಂಗುರವನ್ನು ದಿಟ್ಟಿಸಿ ನೋಡಿ ಕೊನೆಗೆ ಕೇಳಿಯೇಬಿಟ್ಟಳು:

"ಎಂತಾ ಕಲ್ಲು ಇವು? ತಳತಳ ಪಳಪಳಾಂತವೆ!"

ಸಾಹುಕಾರನಿಗೆ ರೇಗಿತು. ಮುಖವೆಲ್ಲಾ ಕೆಂಪಾಯಿತು. ಯಾರೀ ಚಿಕ್ಕ ಪೋರಿ? ಮೈಮೇಲೊಂದು ಬಟ್ಟೆ ಹಾಕಿಕೊಳ್ಳಲು ಗತಿಯಿಲ್ಲ. ಅಂಥ ಪೋರಿ ಬಂದು ನನ್ನಂತಹ ದೊಡ್ಡ ಮನುಷ್ಯನನ್ನು "ಏನು ಕಲ್ಲು ಇವು? ಎಂತ ಕೇಳುತ್ತಿದ್ದಾಳಲ್ಲಾ! ಅವೇನು ಬೀದಿಯಲ್ಲಿ ಬಿದ್ದಿರುವ ಕಲ್ಲುಗಳೇ? ಸಹಸ್ರ ರೂಪಾಯಿ ಸುರಿಸಿರುವ ವಜ್ರಗಳು. ಜೀವಮಾನದಲ್ಲೇ ಎಂದಾದ್ರೂ ನೋಡಿ ದಾಳೋ ಇಲ್ಲವೊ! ಹೂಂ...ಎಂದು ಯೋಚಿಸುತ್ತಾ ಸಾಹುಕಾರ ನಿಂತ.

"ನಿಮ್ಮಪ್ಪ ಅವನೇನೆ?" ಎಂದು ಕೇಳಿದ. ಶೀಲಿ ಮಾತಾಡಲಿಲ್ಲ. ಬೆರಗು

ಕಣ್ಣುಗಳಿಂದ ಅವನನ್ನೇ ನೋಡುತ್ತಾ, ಅಲ್ಲೇ ನಿಂತುಬಿಟ್ಟಿದ್ದಳು ಸಾಹುಕಾರ ಇನ್ನೊಮ್ಮೆ ಗದರಿಸಿ ಕೇಳಿದಾಗ, ಆಕೆಗೆ ಭೀತಿಯಾಯಿತು ಓಡುತ್ತೋಡುತ್ತಾ ಹೋಗಿ ನಾಯಕನನ್ನು ಕರೆದುತಂದಳು.

"ಅಪ್ಪಾ ಬಿದ್ದೆ ಬಂದ್ರಿ" ಎಂದು ನಾಯಕ ಎರಡು ಕೈಗಳನ್ನೂ ಮುಗಿದು ಹಲ್ಲು ಕಿರಿದ.

"ಇಲ್ಲಿ ಮನೆ ಕಟ್ಟಿಸ್ಬೇಕೂಂತ ಮಾಡಿದೀವಿ. ಇದು ನಮ್ಮ ಜಮೀನು ಗೊತ್ತಿದೆಯೋ ಇಲ್ಲವೋ ?"

"ಹೌದ್ರೀ ನನ್ನೊಡೆಯಾ!" ಎಂದು ನಾಯಕ ತಲೆ ಬಾಗಿಸಿ ಹೇಳಿದ.

"ಇನ್ನೆರಡು ದಿನದೊಳಗೆ ಎಲ್ಲಾದ್ರೂ ಹೋಗಿಬಿಡಿ, ಇಲ್ಲದಿದ್ರೆ ಆಳುಗಳ್ನ ಕರಕೊಂಡುಬಂದು ಒದ್ದೋಡಿಸ್ತೀನಿ."

ಅಷ್ಟು ಹೊತ್ತು ಹಲ್ಲು ಕಿರಿಯುತ್ತಿದ್ದ ನಾಯಕನ ಮುಖ ಗಂಭೀರ ವಾಯಿತು.

"ಎಲ್ಹೋಗಾನ ಬುದ್ಧಿಯೋರೆ ?" ಎಂದು ಆತ ಕೇಳಿಕೊಂಡ.

ಸಾಹುಕಾರ ತಿರುಗಿ ಹೊರಟವನು ತಡೆದು ನಿಂತು ಕೆಂಗಣ್ಣು ಬಿಟ್ಟ.

"ನನ್ನೇನು ಕೇಳ್ತೀ—ಬಡ್ಡೀಮಗ್ನೇ ಒಳ್ಳೆ ಮಾತ್ನಿಂದ ಹೋಗ್ದಿದ್ರೆ ಪೋಲೀಸರನ್ನ—"

ಹತ್ತಾರು ಜನ ಅಲ್ಲಿ ಸೇರಿಬಿಟ್ಟಿದ್ದರು, ಸಾಹುಕಾರ ಆ ನೀರಿನಲ್ಲೇ ದಪ್ ದಪ್ ಎಂದು ಸದ್ದು ಮಾಡುತ್ತಾ ಹೊರಟುಹೋದ.

ಅವನು ಮರೆಯಾಗುವುದನ್ನೇ ಆ ಜನ ನೋಡುತ್ತಾ ನಿಂತಿದ್ದರು. ಅವರೆಲ್ಲರ ಮುಖದ ಮೇಲೆ ಮ್ಲಾನತೆಯ ಗೆರೆಗಳು ಕಾಣಿಸಿಕೊಂಡವು.

"ಎಲ್ಲಿ ಹೋಗಾನಾ ?" ಎಂದು ನಾಯಕ ಆಕಾಶದ ಕಡೆ ನೋಡುತ್ತಾ ನಿಂತ. ಅವನ ಸುತ್ತಲಿದ್ದವರೂ ಅವನಂತೆಯೇ ನಿಸ್ಸಹಾಯರು.

ಅವರ ದಿಬ್ಬದ ಸುತ್ತಲೂ ನಿಂತಿದ್ದ ನೀರು, ಸುತ್ತಮುತ್ತಲಿನ ಸಂಪರ್ಕ ದಿಂದ ಅವರನ್ನು ಬೇರ್ಪಡಿಸಿತ್ತು. ಪ್ರಪಂಚದ ಎಲ್ಲ ಜನರಿಂದಲೂ ತಾವು ಬೇರೆ, ನಮ್ಮ ಜೊತೆಗೆ ಯಾರೂ ಇಲ್ಲ, ಎನ್ನುವ ಭಾವ ಅವರೆಲ್ಲರ ಮನಸ್ಸಿ ನಲ್ಲಿ ಹಣಿಕಿಹಾಕುತ್ತಿತ್ತು.

ಯುವಕರು ನಾಲ್ಕಾರು ಜನ ಸೇರಿದರು.

"ಒರಾಡಾನ. ನಾವೀ ತಾವು ಬಿಟ್ಹೋಗಾಣೆಲ್ಲ!" ಎಂದು ಕಿರಿಚಾಡಿದರು ಅವರು.

"ನಮ್ಕೈಲಿ ಏನೈತೆ? ಯಾವುದ್ರಿಂದ ಒರಾಡೋದು? ಅವರ್ತಾವ ಸರ್ಕಾರ ಐತೆ. ಪೋಲೀಸ್ರವ್ರೆ" ಎಂದು ಹಿರಿಯರು ಹೇಳಿದರು.

"ಅಂಗಾದ್ರೆ, ಅಂಗಾದ್ರೆ—ಏನ್ಮಾಡಾನ? ಎಲ್ಲಿ ಓಗಾನಾ?" ಎಂದು ಎಲ್ಲರೂ ಅಸಹಾಯತೆಯ ಅಸಮಾಧಾನದ ಧ್ವನಿಯಲ್ಲಿ ಕೇಳಿದರು.

"ಇಲ್ಲಿನ್ ಋಣ ಅರಿದೋಯ್ತು. ಒರಡಾನ ಇನ್ನು" ಎಂದು ಅಸಹಾಯತೆಯ ಕಣ್ಣೀರು ಸುರಿಸಿದ ನಾಯಕ.

ವಾಗೀಶಿ, ಆರ್ಮಗನ ಕತ್ತಿಗೆ ಜೋತು ಬಿದ್ದಳು.

"ಎಲ್ಲಿಗ್ಹೋಗೋದು?" ಎಂದಳು ರೋದಿಸುತ್ತ. ಆರ್ಮಗ ಕೈಮಾಡಿ ಹಟ್ಟೀಲಿ ಒಟ್ಟಿಗೆ ಕುಳಿತಿದ್ದ ಹಿರಿಯರ ಕಡೆಗೆ ತೋರಿಸಿ, "ಅವರೆಲ್ಲಾ ಎಲ್ಲಿ ಹೋಗ್ತಾರೋ ಅಲ್ಗೇ" ಎಂದ. ವಾಗೀಶಿ ಸೆರಗು ಬಾಯಿಗೆ ತುರುಕಿಕೊಂಡು ಅತ್ತಳು.

ಅವಳು ಏನೇನೋ ಭಾವಿಸಿಕೊಂಡಿದ್ದಳು. ತಾನು ಅವರೆಲ್ಲರಿಗಿಂತ ಬೇರೆ, ತನ್ನ ಗಂಡ ಬೇಕಾದಷ್ಟು ಸಂಪಾದಿಸ್ತಾನೆ, ತಾವು ದುಡ್ಡಿರೋರು, ಚೆನ್ನಾಗಿ ಊಟ ಮಾಡ್ತೇವೆ, ತಾನು ಒಳ್ಳೇ ಸೀರೆ ಉಟ್ಕೊಂಕೋತೇನೆ!—ಎಂತ ಆದರೆ ಅದೆಲ್ಲಾ ಹುಸಿ. ತೋರಿಕೆಯ ಆಡಂಬರ. "ನಾನಿಷ್ಟು ದಿನ ದೂರಿದ ತಾಯಿಂದಿರೇ ಈಗ ನನ್ನ ಆಧಾರ" ಎಂದು ನೆನೆದು ವಾಗೀಶಿ ಅತ್ತಳು. ಆ ಅಳುವಿನ—ದುಃಖದ ಹೊಳೆಯಲ್ಲಿ ಅಹಂಕಾರ ಕರಗಿ ನೀರಾಗಿ ಹರಿಯಿತು. ವಾಗೀಶಿ ಹೋಗಿ ತನ್ನಂತೆಯೇ ಭಿಕಾರಿಗಳಾದ ಇತರ ತಾಯಂದಿರ ಬಳಿ ಕುಳಿತಳು.

ಒಂದು ದಿನ ಬೆಳಗಿನ ನಸುಂಬೆಳಕಿನಲ್ಲಿ ಅವರೆಲ್ಲಾ ಹೊರಟರು. ಮೈ ಮೇಲೆ ಹೊತ್ತ ಒಂದು ಮಕ್ಕರಿ, ಒಂದು ಗುದ್ದಲಿ, ಒಂದೆರಡು ಮಡಕೆ, ಇವಿಷ್ಟೇ ಇವರ ಆಸ್ತಿ. ಇದು ಹಗಲು ರಾತ್ರಿ, ಹುಟ್ಟಿದಾಗಿನಿಂದ ದುಡಿದು ಅವರು ಸಂಪಾದಿಸಿರುವ ಹಿರಿಯ ಆಸ್ತಿ!

ಕಾಗೆಗಳು ಚೀರುತ್ತಿದ್ದವು. ಅವರು ಆವರೆಗೆ ಸಾಕಿದ ನಾಯಿಗಳು ಬೌ ಬೌ ಎಂದು ಅಳುವ ಧ್ವನಿಯಲ್ಲಿ ಬೊಗಳುತ್ತಿದ್ದವು. ಮಕ್ಕಳು ಹೊಟ್ಟೆ ಹಸಿವಿನಿಂದ ಅಳುತ್ತಿದ್ದವು. ದೂರದಿಂದ ನಿಂತು ನೋಡಿದವರಿಗೆ ಕಾಣಿಸುತ್ತಿದ್ದುದು ಮಸಕುಮಸಕಾದ ಆಕೃತಿಗಳು ಮಾತ್ರ. ಎಲ್ಲಿಗೋ

ಕೊನೆಯಿಲ್ಲದ ಪಯಣಕ್ಕೆ ಹೊರಟಿರುವ ಯಾತ್ರಿಕರಂತಿದ್ದರು ಅವರು.

ಬೆಳಕು ಹರಿದಾಗ, ಸಾಹುಕಾರರ ಆಳು ಜನ ಬಂದು ಗುಡಿಸಲುಗಳನ್ನು ಉರುಳಿಸತೊಡಗಿದರು.

ಸೋನ್ಯಾನ ಕೈಯನ್ನು ತನ್ನ ಹೆಗಲ ಮೇಲಿಟ್ಟುಕೊಂಡು ನಡೆದಿದ್ದ ಶೀಲಿ ದೂರದಿಂದ ತಿರುಗಿ ನೋಡಿದಳು. ಸಾಹುಕಾರರ ಆಳುಗಳು ತಮ್ಮ ಗುಡಿಸಲನ್ನು ಕಿತ್ತುಹಾಕುತ್ತಿದ್ದುದನ್ನು ಕಂಡು ಕೂಗಾಡಿದಳು.

"ಅವ್ವಾ–ನೋಡ್ಲೆ ! ಅವ್ನು ನಮ್ಗುಡ್ಲನ ಕಿತ್ತು ಆಕ್ತಿರೋದೂ !" ಎಂದು ಅವ್ವನ ಸೀರೆ ಹಿಡಿದು ಜಗ್ಗಿದಳು.

ಎಲ್ಲರೂ ತಿರುಗಿ ನೋಡಿದರು. ಸಾಹುಕಾರರ ಆಳು ಜನ ತಮ್ಮ ಗುಡಿಸಲುಗಳಿಗೆ ಹಾಕುತ್ತಿದ್ದ ಪಟು ತಮ್ಮ ಹೃದಯಕ್ಕೇ ತಗುಲುತ್ತಿದ್ದಂತೆ ಅವರಿಗೆ ಭಾಸವಾಯಿತು.

ಹಾಗೆ ಮಣ್ಣುದಿಬ್ಬ ಸ್ಮಶಾನವಾಯಿತು. ಆ ಸ್ಮಶಾನದ ಮೇಲೆ ಇನ್ನು ಕೆಲವಾರು ದಿನಗಳಲ್ಲೇ ಸಾಹುಕಾರನ ಮಹಡಿ ಮನೆಯ ನಿರ್ಮಾಣ.

ಮೇ, ೧೯೫೨

# ಆ ಮೂರು ಮನೆಗಳು

ಬಿಡುವಿಲ್ಲದೆ ಬಾರಿಸುತ್ತಿದ್ದ ಅಲಾರಂನ ಸದ್ದು ಕಿವಿ ಕೊರೆಯುತ್ತಿದ್ದರೂ ಏಳಲೋ ಬೇಡವೋ ಎಂದು ಯೋಚನೆಮಾಡುತ್ತಾಬಿದ್ದುಕೊಂಡಿದ್ದೆ. ಎರಡು ನಿಮಿಷ ಕಳೆದರೂ ಅದು ನಿಲ್ಲುವ ಸೂಚನೆ ಕಾಣದಾದಾಗ ಸ್ವಲ್ಪ ಕೋಪವೇ ಬಂತು. ಎದ್ದು, ಶಕ್ತಿಯೆಲ್ಲಾ ಒಡಿದಮುಕಿ, ಅಲಾರಂ ನಿಲ್ಲಿಸಿದೆ. ಆ ಗೊಂದಲಕ್ಕೆ ನಿದ್ರೆ ಓಡಿಹೋಯಿತು. ಮತ್ತೆ ಹಾಸಿಗೆಯ ಮೇಲುರುಳಿದರೂ ಪ್ರಯೋಜನವಾಗಲಿಲ್ಲ.

ಕಡೆಯ ಯೋಚನೆ ಮಾಡಿ, ಮೇಜಿನ ಬಳಿಗೆ ಬಂದು, ಮೇಜಿನ ಮೇಲೆ ಅಸ್ತವ್ಯಸ್ತವಾಗಿ ಹರಡಿದ್ದ ಹಾಳೆಗಳನ್ನು ಎತ್ತಿಕೊಂಡೆ.

ಬೆಳಗಿನ ಜಾವವಾದರೂ ಬೇಸಗೆಯ ದಿನಗಳಿವು. ಅಸಹನೀಯ ಸೆಖೆ.

ಗಾಳಿ ಬರಲೆಂದು ಕಿಟಕಿ ತೆರೆದೆ. ತೆರೆದ ಕಿಟಕಿಯಾಚೆ, ಕಣ್ಣುಗಳು ಹೊರಳಿ ನೋಡಿದುವು. ಇನ್ನೂ ಬೆಳಕು ಹರಿದಿರಲಿಲ್ಲ. ಆದರೂ ಆ ಕತ್ತಲೆಯ ಮಬ್ಬಿನಲ್ಲೇ ಆ ಮೂರು ಮನೆಗಳು ಮಸುಕುಮಸುಕಾಗಿ ಕಾಣಿಸುತ್ತಿದ್ದುವು. ಒಂದಕ್ಕೊಂದು ಸಂಪರ್ಕವಿಲ್ಲದಷ್ಟು ದೂರದ ಅಂತರ ಒಂದು ಇನ್ನೊಂದರ ನಡುವೆ, ಆದರೂ—

ಪುನಃ ಪುನಃ, ದೃಷ್ಟಿ-ಮನ ಆ ಮನೆಗಳತ್ತ ಹರಿದುವು.

ಒಂದು ಪುಟ್ಟ ಮನೆ; ಮತ್ತೊಂದು ಮಹಡಿ ಮನೆ; ಮೂರನೆಯದು ಗುಡಿಸಲು, ಆ ಮೂರು ಮನೆಗಳ ಇತಿಹಾಸ ಒಂದು ಭಾರೀ ಸಂಪುಟ ತುಂಬುವಷ್ಟು ದೊಡ್ಡದು.

* * *

ಗಣ ಗಣ ಗಣ ಎಂದು ಗಂಟೆ ಬಾರಿಸುವ ಸದ್ದು ಕೇಳಿಸುತ್ತಿತ್ತು. ಹೊತ್ತಾಯಿತು. ಇನ್ನು ಹೊತ್ತಾಯಿತು, ಎಂದು ಭಾಗ್ಯಮ್ಮ ಲಗುಬಗೆಯಿಂದ ಒಲೆಗೆ ಕಟ್ಟಿಗೆಯನ್ನು ತುರುಕಿ, 'ಉಫ್...ಉಫ್' ಎಂದು ಊದುತ್ತಿದ್ದಳು.

ಎರಡು ನಿಮಿಷ ಹೊಗೆಯಾಡಿ ಬೆಂಕಿ ಭಗ್ ಎಂದು ಹೊತ್ತಿಕೊಂಡಿತು. ಭಾಗ್ಯಮ್ಮ ಕಣ್ಣು ಮೂಗಿನೊಳಗೆ ಸೇರಿದ್ದ ಹೊಗೆಯಿಂದಾಗಿ ಎರಡು ಬಾರಿ

ಕೆಮ್ಮಿ ಮುಖ ಒರೆಸಿಕೊಂಡಳು. ಇನ್ನರ್ಧ ಗಂಟೆಯ ವೇಳೆ—ಅಷ್ಟರಲ್ಲಿ ಸಾರು, ಹುಳಿ, ಸಿದ್ಧವಾಗಬೇಕು. ಪಲ್ಯಕ್ಕೆ ಒಗ್ಗರಣೆ ಹಾಕಬೇಕು...ಮಜ್ಜಿಗೆ ಕಡೆದಿಡಬೇಕು...ಆಮೇಲೆ ಆಮೇಲೆ...ಉಳಿದ ಕೆಲಸವೆಂದರೆ ಯಜಮಾನರ ಕೋಟಿಗೆ ಗುಂಡಿ ಹಾಕುವುದು...ಹೂಂ...

ಒಲೆ ಆರಿಹೋಯಿತು. ಊದುಗೊಳವೆ ತೆಗೆದುಕೊಂಡು ಮತ್ತೆ ಊದತೊಡಗಿದಳು ಭಾಗ್ಯಮ್ಮ...'ಉಫ್ !...ಊಫ್ !...ಊಫ್...!'

"ಥೂ...ಥೂ...ಏನು ಹೊಗೇನೇ ಇದೂ..ಕೋಟಿಗೆ ಗುಂಡಿ ಹಾಕಿಡೂಂದ್ರೆ ಹಾಕಿದ್ಯೇನೆ ?—ಅದೇನ್ ಕೆಲ್ಸ ಮಾಡ್ತಿರ್ತೀ ದಿನಾ ಎಲ್ಲಾ...ಊಂ ಏನು ನನಗಿಷ್ಟು ಅನ್ನದ ಮುಖ ಕಾಣಿಸ್ತೀಯೋ ಇಲ್ವೋ ಇವತ್ತು... ?" ಎಂದು ಕೂಗಾಡುತ್ತಲೇ ಗಂಗಾಧರಯ್ಯ ಅಲ್ಲಿಗೆ ಬಂದರು.

"ಆಗಿಹೋಯ್ತೂಂದ್ರೆ, ಆಗೇಹೋಯ್ತು. ಇನ್ನೇನು ಒಗ್ಗರಣೆ ಹಾಕೋದೊಂದೇ ಬಾಕಿ !" ಎಂದು ಭಾಗ್ಯಮ್ಮ ಹೇಳಿದಳು. ಶಪಿಸುತ್ತಲೇ ಹೊರಗೆ ನಡೆದರು ಅವರ ಪತಿದೇವರು.

ಉರಿಯುತ್ತಿದ್ದ ಒಲೆಯನ್ನು ನೋಡುತ್ತಾ ಭಾಗ್ಯಮ್ಮ ಕುಳಿತುಬಿಟ್ಟಳು. ಆ ಕೆಂಪು ಬೆಳಕು ಅವಳ ಯೌವನ ಕಳೆದಿದ್ದ ಎಣ್ಣೆಗೆಂಪು ಮುಖದ ಮೇಲೆ ಮಿನುಗಿ ಮಾಯವಾಗುತ್ತಿತ್ತು. ಅದರ ಬೆಳಕಿಗೆ ಅವಳ ಮೂಗುಬಟ್ಟು ಆಗೊಮ್ಮೆ, ಈಗೊಮ್ಮೆ, ಥಳಕ್ಕನೆ ಮಿಂಚುತ್ತಿತ್ತು. ಆ ಮಂದ ಪ್ರಕಾಶದಲ್ಲೂ, ಅವಳ ಮುಖದ ಮೇಲೆ ಮೂಡಿದ್ದ ಯಾತನೆಯ ಗೆರೆ ಕಾಣುತ್ತಿತ್ತು. ಹಿಂದಿನ ನೆನಪು ಬಾಧಿಸಿರಬೇಕು ಅವಳನ್ನು. ವರ್ಷವರ್ಷವೂ ಸಾಗುತ್ತ ಬಂದಿದ್ದ ಪತಿಯ ಅನ್ಯಾಯದ ಆಳ್ವಿಕೆಯ ಆ ನೆನಪುಗಳು—ಕಹಿ ನೆನಪುಗಳು...

ಬಡವರ ಹೊಟ್ಟೆಯಲ್ಲಿ ಹುಟ್ಟಿ ಬಂದಿದ್ದಳು ಭಾಗ್ಯ. ಅವಳು ಹುಟ್ಟಿದಾಗಲೇ ಸುತ್ತುಮುತ್ತಲವರೆಲ್ಲಾ ಅಂದಿದ್ದರಂತೆ. "ಹೆಣ್ಣುಮಗು...ವಂಶೋದ್ಧಾರಕ ಹುಟ್ಟಲಿಲ್ಲ, ಇಲ್ಲ..." ಎಂತ. ತಂದೆ ತಾಯಿಗಳಿಗೂ ಜಿಗುಪ್ಸೆ—ಹೆಣ್ಣು ಹುಟ್ಟಿತಲ್ಲಾ ಎಂದು...ಇನ್ನು ಆ ಮಗು ಬೆಳೆಯಬೇಕು. ಹದಿನಾಲ್ಕು, ಹದಿನೈದು ವರುಷ. ಅನಂತರದ ಮದುವೆಯ ಬಗ್ಗೆ ಆಗಲೇ ಯೋಚನೆ. ಭಾಗ್ಯನ 'ಕಾಲುಗುಣ'ವೋ ಏನೋ ಅವರ ತಾಯಿಗೆ ಮತ್ತೆ ಮಕ್ಕಳಾಗಲಿಲ್ಲ ! ಅದರ ತಪ್ಪೆಲ್ಲಾ ಭಾಗ್ಯನದೆಂದು ದೂರಿ ಜರೆದರು ಅವಳಜ್ಜಿ. ಹುಡುಗಿ

ನೊಂದುಕೊಂಡಳು.ಅತ್ತಳು. ಆದರೆ ಯಾರೂ ಸಾಂತ್ವನದ ಒಂದು ಮಾತನ್ನೂ ಆಡಲಿಲ್ಲ...ಸಹಾನುಭೂತಿ ತೋರಿಸಲಿಲ್ಲ. ಎಲ್ಲ ಹೆಣ್ಣುಮಕ್ಕಳಂತೆ ಅವಳೂ ಬೆಳೆದಳು. ವಿದ್ಯೆಯ ಗಂಧವಿಲ್ಲದೆ, ನಾಗರಿಕತೆಯ ಸೋಂಕಿಲ್ಲದೆ, ಕಾಡು ಕುಸುಮವಾಗಿ, ಬೆಳೆದಳು. ಹೊರಗಿನ ಪ್ರಪಂಚದ ಕೌಟಿಲ್ಯ, ಹಿಂಸೆ, ಪಶು ವೃತ್ತಿಗಳ ಬಗ್ಗೆ ಆಕೆ ಎಂದೂ ಯೋಚಿಸಿರಲಿಲ್ಲ. ಮನೆಗೆಲಸವೆಲ್ಲಾ ಕಲಿತಾದ ಮೇಲೆ ತಾಯಿ ಪತಿಭಕ್ತಿಯ ನೀತಿಬೋಧನೆ ಮಗಳಿಗೆ ಮಾಡುತ್ತಿದ್ದಳು. ತಾಯಿ, ಸೀತಾ-ರಾಮ, ಸಾವಿತ್ರೀ-ಸತ್ಯವಾನರ ಕತೆ ಹೇಳುತ್ತಿದ್ದಾಗ ಆ ಹುಡುಗಿ, ಕಣ್ಣರಳಿಸಿ ಕೇಳುತ್ತಾ ಕುಳಿತುಕೊಳ್ಳುತ್ತಿದ್ದಳು. ಕತೆಗಳನ್ನೆಲ್ಲಾ ಮುಗಿಸಿ, ''ನೀನು ಅವರಂತೆ ಆಗಬೇಕು. ಗಂಡ ಹೇಳಿದ ಮಾತು ಮೀರ ಬಾರದು. ಅವರೇ ದೇವರು, ದೈವ !'' ಎಂದು ತಾಯಿ ಹೇಳಿದಾಗ ಭಾಗ್ಯ ಒಪ್ಪಿಗೆ ತೋರುವ ರೀತಿಯಲ್ಲಿ ತಲೆಯಾಡಿಸುತ್ತಿದ್ದಳು.

ಒಮ್ಮೆ ತಂದೆ ತಾಯಿ ಏಕಾಂತದಲ್ಲಿ ಮಾತಾಡುತ್ತಿದ್ದಾಗ ಕದ್ದು ಕೇಳಿದಳು ಹುಡುಗಿ. ತನ್ನ ಮದುವೆಯ ಬಗ್ಗೆ ಅವರು ಯೋಚಿಸುತ್ತಿದ್ದಾರೆಂದು ತಿಳಿದೊಡನೆ ಅವಳ ಮುಗ್ಧ ಹೃದಯ ಉಬ್ಬಿಹೋಯಿತು. ''ಸರಿ. ಇನ್ನು ನನಗೆ ಮದುವೆಯಾಗುತ್ತೆ'' ಎಂದು ಕುಣಿದಾಡಿದಳು. ಆದರೆ ಅವಳೆಣಿಸಿದಷ್ಟು ಸುಲಭವಾಗಿ ಮದುವೆ ಆಗಲಿಲ್ಲ. ಹಲವಾರು ಜನ ಬಂದು ನೋಡಿಹೋದರು. ಅವರಲ್ಲಿ ಯಾರು ತನ್ನ ಗಂಡ ಎಂದು ಮಾತ್ರ ಅವಳಿಗೆ ಗೊತ್ತಾಗಲಿಲ್ಲ. ಕೊನೆಗೆ ಅವರೆಲ್ಲಾ ತನ್ನನ್ನು ನಿರಾಕರಿಸಿದರು ಎಂದು ತಿಳಿಯಿತು. ಅಳಬೇಕೆನಿಸಿತು ಅವಳಿಗೆ. ಆದರೆ ಧೈರ್ಯ ಬರಲಿಲ್ಲ.

ಕೊನೆಗೆ ಬಂದವರು ಅವರು. 'ಗಂಗಾಧರಯ್ಯ—ಗಂಗಾಧರಯ್ಯ!' ಎಂದು ಹೆಸರು ಹೇಳಿಕೊಂಡಾಗ, ಎದುರಿಗೆ ಯಾರೂ ಇಲ್ಲದಿದ್ದರೂ ಅವಳ ಮುಖ ಕೆಂಪೇರಿಹೋಯಿತು. ನಾಚಿಕೆಯಿಂದ ಮುಖ ಮುಚ್ಚಿಕೊಳ್ಳುವಂತಾಯಿತು.

ಕೊರಳಲ್ಲಿ ತಾಳೀ ಕಟ್ಟಿದ ಮಹಾನುಭಾವನನ್ನು ಕಣ್ಣು ತುಂಬಾ ನೋಡಿ ಹಿಗ್ಗಿದಳು ಭಾಗ್ಯ. ''ಮುತ್ತಿನಂತಹ ಮನುಷ್ಯ !'' ಎಂದು ಯಾರೋ ಹೇಳುತ್ತಿದ್ದುದನ್ನು ಕೇಳಿ ಅವಳ ಕಣ್ಣಿಂದ ಆನಂದಾಶ್ರು ಇಳಿಯಿತು.

ಆದರೆ ಆ ಮುತ್ತು ಒಡೆದ ಮುತ್ತೆಂದು ತಿಳಿಯಲು, ಎರಡು ದಿನಗಳೂ ಬೇಕಾಗಲಿಲ್ಲ.

"ನಿಮ್ಮ ಮನೆಗೆ ಕರೆದೊಯ್ಯಿರಿ!" ಎಂದು ಭಾಗ್ಯನ ತಂದೆ ಹೇಳಿದಾಗ, "ಇನ್ನೂ ಐನೂರು ರೂಪಾಯಿ ಕೊಟ್ಟರೇನೇ! ಇಲ್ಲದಿದ್ರೆ ಬೇರೆ ಮದುವೆ ಮಾಡ್ಕೋತೀನಿ!" ಎಂದು, ತನ್ನ ಮನೆಯವರ ಸೂಚನೆಯಂತೆ, ಬೆದರಿಕೆ ಹಾಕಿದನಂತೆ ಆ ಮನುಷ್ಯ. 'ಛಿ' ಎಂದು ಮೊದಲಿಗೊಮ್ಮೆ ಗಂಡನನ್ನು ಬಯ್ಯ ಬೇಕೆನಿಸಿತು ಭಾಗ್ಯಮ್ಮನಿಗೆ. ಆದರೆ "ಗಂಡ ದೇವರು. ಅವನೇ ಸರ್ವಸ್ವ–ಅವ ನನ್ನು ಬಯ್ಯಬಾರದು" ಎಂದುಕೊಂಡು ಸುಮ್ಮನಾದಳು. ಮನೆಯಲ್ಲಿ ಇದ್ದ ಒಡವೆಯನ್ನೆಲ್ಲಾ ಮಾರಿ, ಅಳಿಯನಿಗೆ ಹಣ ಸುರಿದು, ಮಗಳನ್ನು ಕಳಿಸಿ ಕೊಟ್ಟರು. ಸುತ್ತಮುತ್ತಲ ಮನೆಯವರ ನಿಂದೆಯ ಮಳೆಯಲ್ಲಿ ಮಿಂದು ಭಾಗ್ಯಮ್ಮ ಗಂಡನ ಮನೆ ಸೇರಿದಳು.

ಅಲ್ಲಿ ಎಂಥಾ ಸುಖ ಕಾದಿತ್ತು ಅವಳಿಗೆ!

ಬೆಳಗಿನಿಂದ ಸಂಜೆಯವರೆಗೆ ಅವರ ಮನೆಯ ಎಲ್ಲಾ ಜನರ ಚಾಕರಿ ಮಾಡಿ ದಳು. ಗಂಡನಿಗೆ ಬೇಕೆನಿಸಿದಾಗ ಅವನಿಷ್ಟದಂತೆ ಕುಣಿಯುವ ಕೈಗೊಂಬೆ ಯಾದಳು. ಹುಟ್ಟಿದ ಮಕ್ಕಳ ದಾಸಿಯಾಗಿ ಹಗಲಿರುಳೂ ದುಡಿದಳು.

ಮಕ್ಕಳ ಆರೈಕೆಯಲ್ಲಿ ನೋವು ಮರೆಯಲು ಯತ್ನಿಸಿದಳು ಆಕೆ. ಪತಿಯ ಆಕ್ರೋಶ-ಆಗ್ರಹ ಇವೆಲ್ಲಕ್ಕೂ ಹೇಸಿ, ಬಾಳು ನೀಗಬೇಕೆಂಬ ಯೋಚನೆ ಬಂತು ಒಮ್ಮೆ. ಆದರೆ ಮುದ್ದು ಮಕ್ಕಳನ್ನು ನೆನೆದು, "ಎಂತ ಕೆಟ್ಟ ವಿಚಾರ ಮಾಡ್ತಿದೀನಿ; ಎಂಥ ಪಾಪಿ ನಾನು!" ಎಂದು ತನ್ನನ್ನು ತಾನೇ ಶಪಿಸಿ ಕೊಂಡಳು. ಒಂದರ ಮೇಲೊಂದಾಗಿ ಏಕಪ್ರಕಾರವಾಗಿ ವರುಷಗಳು ಉರುಳಿ ಹೋದುವು. ಮಕ್ಕಳು ಬೆಳೆದು ದೊಡ್ಡವರಾದರು. ಕೊನೆಗೆ—

ಅಷ್ಟು ಪ್ರೀತಿಯಿಂದ ಕಾಪಾಡಿದ ಮಗ ಓದಿ ಕೆಲಸಕ್ಕೆ ಸೇರಿಕೊಂಡು ಮದುವೆಯಾದೊಡನೆ, ದೂರದೂರಿಗೆ ವರ್ಗ ಮಾಡಿಸಿಕೊಂಡು ಹೆಂಡತಿಯ ಜತೆಯಲ್ಲಿ ಹೊರಟುಹೋದ. ಅಲ್ಲಿಗೆ ಮುಗಿದುಹೋಯಿತು, ಅವನ ಸಂಬಂಧ!

ಇನ್ನು ಮಗಳೊಬ್ಬಳು–ಕಾಮಾಕ್ಷಿ ಎಂತ. ಮುಂದಿನ ಕಣಿ ಅವಳು. ಅವಳ ಬಾಳೂ ಮೂರಾಬಟ್ಟೆಯಾಯಿತು. ಹುಡುಗಿ "ಓದುತ್ತೇನೆ. ಮದುವೆ ಬೇಡ!" ಎಂದು ಗೋಳಾಡಿದಳು. ಭಾಗ್ಯಮ್ಮ ಆಗ ಏನು ಹೇಳುವ ಸ್ಥಿತಿಯಲ್ಲೂ ಇರಲಿಲ್ಲ. ಆ ಸ್ವಾತಂತ್ರ್ಯ ಅವಳಿಗೆ ಮೊದಲಿನಿಂದಲೂ ಇಲ್ಲ. ಗಂಗಾಧರಯ್ಯ ಒಂದೇ ಮಾತಿನಲ್ಲಿ "ಸಾಕು ಇಷ್ಟು ದಿನ ನೀನು ಓದಿ ಮಗುಂಚಿಹಾಕಿದ್ದು!"

ಎಂದುಬಿಟ್ಟರು ಮಗಳಿಗೆ. ಹಗಲೂ ರಾತ್ರಿ ಮಗಳು ಅಳುವುದನ್ನು ಕಂಡು ತಾಯ ಹೃದಯ ಕರಗಿ ನೀರಾಯಿತು. ಗಂಗಾಧರಯ್ಯನವರ ಕಾಲಿಗೆ ಬಿದ್ದು "ಮದುವೆ ಈಗ ಮಾಡಬೇಡಿ—ಬೇಡಿ'' ಎಂದು ಬೇಡಿಕೊಂಡಳು. ರೋಷದ ಒದೆ ಉತ್ತರವಾಗಿ ದೊರೆಯಿತು.

ಕಾಮಾಕ್ಷಿ ಏನೇನೋ ಸಾಧಿಸಬೇಕೆಂದು ಆಸೆ ಕಟ್ಟಿಕೊಂಡಿದ್ದಳು ಪಾಪ! ಗಂಗಾಧರಯ್ಯನವರ ಹೂಂಕಾರಕ್ಕೆ ಸಿಲುಕಿ ನಲುಗಿಹೋಯಿತು ಆ ಪುಷ್ಪ. ಮದುವೆ ಮಾಡಿ ಏನೂ ಅರಿಯದ ಹುಡುಗಿಗೆ ಒಂದು ತಾಳಿ ಬಿಗಿಸಿ, ಪರಿಚಯ ವಿಲ್ಲದ, ಒಪ್ಪದ, ಗಂಡಿನ ಮನೆಗೆ ಕಳಿಸಿಬಿಟ್ಟರು...

...ಗಂಗಾಧರಯ್ಯ, ಆಫೀಸಿಗೆ ಹೊತ್ತಾಯಿತೆಂದು ಮತ್ತೆ ಕಿರಿಚುತ್ತಾ ಒಳಗೆ ಬಂದರು. ಸಿದ್ಧವಾದ ಅಡಿಗೆಯನ್ನು ಬಡಿಸಿದರು ಭಾಗ್ಯಮ್ಮ. ಇವತ್ತು ಯೋಚನೆಯಲ್ಲಿ ಅಡಿಗೆ ಕೆಟ್ಟಿದೆಯೆಂದು ಅವಳಿಗೆ ಗೊತ್ತು :

''ಥೂ...ಥೂ...ಏನು ಹಾಳು ಅಡಿಗೆ...!'' ಎಂದೆಲ್ಲಾ ಭಾಗ್ಯಮ್ಮ ಸಹಸ್ರ ನಾಮಾರ್ಚನೆ ಮಾಡಿಸಿಕೊಂಡಳು.

ಊಟ ಮುಗಿಸಿ ಗಂಗಾಧರಯ್ಯ ಆಫೀಸಿಗೆ ಹೋದಾಗ, ಬಾಗಿಲ ಬಳಿ ಅವರು ಮರೆಯಾಗುವುದನ್ನು ನೋಡುತ್ತಾ ನಿಂತುಬಿಟ್ಟಳು. ಆ ಮೂರ್ತಿ ದೂರ ದೂರ ಹೋದಹಾಗೆಲ್ಲ ಅವರ ಒಂದೊಂದು ಮೂರ್ಖತನ, ಕಟುತನ, ಅವಳ ಮನದ ಬಳಿಗೆ ನಡೆದುಬರುತ್ತಿದ್ದವು.

ಒಲ್ಲದ ಮನಸ್ಸಿನಿಂದ ಊಟಮಾಡಿ ಚಾಪೆಯ ಮೇಲುರುಳಿಕೊಂಡಾಗ, ಹೃದಯದ ಉರಿ ಅವಳನ್ನು ದಹಿಸತೊಡಗಿತು.

ತನ್ನ ಬಾಳನ್ನು, ತನ್ನ ಆಸೆ ಆಕಾಂಕ್ಷೆಗಳನ್ನು ಭಸ್ಮಮಾಡಿಬಿಟ್ಟರು. ಜೊತೆಗೆ ಮಗಳ ಜೀವನವನ್ನು ಮಣ್ಣುಗೂಡಿಸಿದರಲ್ಲಾ ಇವರು—

ಒಂದೇ ಎರಡೇ ಅವರ ಮೇಲೆ ಆರೋಪ ?

ತನ್ನ ಗಂಡನ ಮನೆಯಿಂದ ಬಂದಾಗಲೊಮ್ಮೆ ಕಾಮಾಕ್ಷಿ ಹೇಳುತ್ತಿದ್ದ ಮಾತುಗಳು ನೆನಪಿಗೆ ಬಂದುವು.

''ನೋಡಮ್ಮ ಸಾವಿರಾರು ಜನ ನಮ್ಮ ಸುತ್ತಮುತ್ತ ಸಾಯ್ತಿದ್ದಾರೆ. ಅವರಿಗಾಗಿ ನಾವು ಒಂದು ಕನಿಕರದ ಮಾತು ಸಹ ಆಡ್ತಾ ಇಲ್ಲ. ಅವರ ಹಾಗೆಯೇ ನಾವೂ...ಭೂಮಿಗೆ ಭಾರ.''

"ನಾನು ಭೂಮಿಗೆ ಭಾರವಾಗಿದೇನೆಯೆ?—ನೋಡು ನಿನ್ನಂತ ಮಕ್ಕಳ್ನ ಹೆತ್ತು ಹೊತ್ತು ದಾನ ನೀಡಿದ್ದೀನಿ ಮನೆಗೆಲಸ ಮಾಡ್ತೀನಿ. ಇದಕ್ಕಿಂತ ಹೆಚ್ಚು ಇನ್ನೇನು ಬೇಕು ?"

"ಇಷ್ಟೇನೇ ? ಇಷ್ಟೇನೇ ಜೀವನ ಎಲ್ಲಾ ? ನಮ್ಮಂತಹ ಮಕ್ಕಿಂದ ಯಾರಿಗೇನು ಸಹಾಯ ?—ನಾನು ಒಲ್ಲದ ಗಂಡನ ಜೊತೆ ಹೊಂದಿಕೊಂಡು ಬಾಳ್ತಾ ಇದೀನಿ. ಅಣ್ಣ ಅಲ್ಲೆಲ್ಲೋ ಹೆಂಡ್ತೀ ಜೊತೇಲಿ ಸೌಖ್ಯವಾಗಿ ತಿಂದುಂಡಿದಾನೆ. ನಾವಿಬ್ರೂ ಏನು ಉದ್ಧಾರ ಮಾಡ್ತಿದೇವೆ ?—ಏನು ಪ್ರಯೋಜನ ನಮ್ಮನ್ನ ಹೆತ್ತು, ಹೊತ್ತು, ಸಾಕಿ ಸಲಹಿ...?"

ಭಾಗ್ಯಮ್ಮ ಕಿವಿ ಮುಚ್ಚಿಕೊಂಡಳು...ಅವಳ ಕಣ್ಣಲ್ಲಿ ನೀರು ಬಂದಿತ್ತು.

"ಎಲ್ಲಕ್ಕೂ ಕಾರಣ, ಅವರೇ...ಅವರೇ !" ಎಂದವಳಿಗೆ ಗೊತ್ತಿದ್ದರೂ "ಅವರು ನನ್ನ ದೇವರು...ಅವರೇನು ಮಾಡಿದರೂ ಸಹಿಸಬೇಕು, ಸಹಿಸ ಬೇಕು !" ಎಂದು ಹಿರಿಯರು ಕಲಿಸಿದ್ದ ನಂಬುಗೆ ಅವಳನ್ನು ಅಣಕಿಸುತ್ತಿತ್ತು.

ಗಂಗಾಧರಯ್ಯ ಅವಳ ಜೀವಮಾನವನ್ನೆಲ್ಲಾ ಹಾಳುಮಾಡಿದ್ದರೂ, ಮಗ ನನ್ನು ಆಡಳಿತದ ಊಳಿಗದವನಾಗಿ ತಯಾರಿಸಿದ್ದರೂ, ಮಗಳನ್ನ ಒಲ್ಲದ ಗಂಡನಿಗೆ ಮದುವೆ ಮಾಡಿಕೊಟ್ಟಿದ್ದರೂ—ಅವರು ಅವಳ ದೇವರಂತೆ ಅವರನ್ನು ಅವಳು ಎಂದಿಗೂ ಟೀಕಿಸಬಾರದಂತೆ, ನಿಂದಿಸಬಾರದಂತೆ.

ಹೊಸ ಬಾಳಿಗಾಗಿ ಹಾತೊರೆಯುತ್ತಿದ್ದರೂ, ಹಳೆಯ ಬಾಳನ್ನು ಎದುರಿಸ ಲಾರದೆ ಅದಕ್ಕೇ ಶರಣುಹೊಕ್ಕಳು. ವಾತಾವರಣದ ಕೂಸಾದ್ದ ಭಾಗ್ಯಮ್ಮ !

* * *

ಮಹಡಿಯಿಂದ ತಾರಸೀ ಮನೆ ಅದು. ಮನೆಯ ಮುಂದೆ ಸುಂದರವಾದ ಹೂದೋಟ. ಗೇಟಿನ ಬಾಗಿಲು ತೆರೆದೊಡನೆ ಮುಂದೆ ನಡೆದರೆ ಎದುರಿಗೇ ಮನೆಯ ಬಾಗಿಲು. ಬಾಗಿಲಿನ ಹಿಂಭಾಗದಲ್ಲಿ 'ವರಾಂಡ.'

ಒಳಗೆ ಹೋಗುವ ಎರಡು ಬಾಗಿಲುಗಳಿಗೂ ಪರದೆ ಇಳಿಯಬಿಟ್ಟಿದ್ದರು. ಹಾಗೇ ಕಣ್ಣೋಡಿಸಿದರೆ ಗೋಡೆಗಳ ಮೇಲೆ ಪ್ರಕೃತಿಸೌಂದರ್ಯದ ನಾಲ್ಕಾರು ಸುಂದರ ದೃಶ್ಯದ ಫೋಟೋಗಳು. ರೂಮಿನ ಮಧ್ಯೆ ಗುಂಡು ಟೇಬಲಿನ ಮೇಲೆ ಒಂದು ಹೂವಿನ ಕುಂಡ ; ಅದರ ಸುತ್ತಲೂ ನಾಲ್ಕಾರು ಬೆತ್ತದ ಕುರ್ಚಿಗಳು.

ಮನೆಯೊಡತಿ ಸುಭದ್ರಾ ಕನ್ನಡಿಯ ಮುಂದೆ ಕುಳಿತಿದ್ದಳು. ತನ್ನ ಇಳಿದು

ಹೋದ ಕಣ್ಣುಗಳು, ಬಾಡಿ ಬತ್ತಿದ ಕಪೋಲ, ಹಣೆಯ ಮೇಲೆ ಹಾರಾಡು ತ್ತಿದ್ದ ಮುಂಗುರುಳು. ಇವೆಲ್ಲವನ್ನೂ ಮತ್ತೆ ಮತ್ತೆ ನೋಡುತ್ತಾ ಕುಳಿತು ಕೊಂಡಿದ್ದಳು ಆಕೆ.

ದಾಸಿ ನಂದಿ ಒಳಗೆ ಬಂದು ಕತ್ತಲಾಗಿದ್ದ ಕೋಣೆಯಲ್ಲಿ ದೀಪ ಹಚ್ಚಿದಳು.

ಕನ್ನಡಿಯ ಮುಂದೆ ಅಲುಗಾಡದೆ ಕುಳಿತಿದ್ದ ಸುಭದ್ರಾಳನ್ನೆಚ್ಚರಿಸಿ "ಹೊತ್ತಾಯಿತಮ್ಮಾ ಇನ್ನು ರಾಯರು ಬರುತ್ತಾರೆ—ರಾಯರು" ಎಂದು ಹೇಳಿದಳು.

ರಾಯರೆಂದೊಡನೆ ಸುಭದ್ರಾ ಹೊರಳಿ ನೋಡಿದಳು. ಮನೆಯ ಸುತ್ತಲೂ ಅವಳ ಕಣ್ಣೋಡಿತು. ರಾಯರು ಕೊಡಿಸಿದ ಆ ಮನೆಯ ಮೇಲೆ ಅವಳಿಗೆ ಜಿಗುಪ್ಸೆ ಬಂದಿತ್ತು.

"ತಲೆ ಬಾಚಲೆ ?" ಎಂದು ಕೇಳಿದಳು ನಂದಿ. ಸುಭದ್ರಾ ಹೂಗುಟ್ಟಿದಳು.

ನಿಧಾನವಾಗಿ ನಂದಿ ಅವಳ ತಲೆ ಬಾಚಿ ಹೆರಳು ಹಾಕಿದಳು. ಅಣಿ ಮಾಡಿಟ್ಟಿದ್ದ ದುಂಡು ಮಲ್ಲಿಗೆಯ ದಂಡೆ ತಂದು ತುರುಬಿಗೆ ಮುಡಿಸಿದಳು. ಮುಖಕ್ಕೆ ಮೆಲುವಾಗಿ, ಪೌಡರು ಬಳಿದಾಯಿತು. ಕಣ್ಣಿಗೆ ಕಾಡಿಗೆ, ತುಟಿಗೆ ಮೆಲುವಾದ ಕೆಂಪು ಬಣ್ಣ...

ಅದುವರೆಗೆ ಮೌನವಾಗಿ ಕುಳಿತಿದ್ದ ಸುಭದ್ರಾ ನಂದಿಯನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಯಾಕಮ್ಮಾ ? ಏನಾಯಿತು ?" ಎಂದು ಕೇಳಿದಳು ನಂದಿ.

"ಇವತ್ತು ರಾಯರು ಬರದೆ ಇರುತ್ತಿದ್ದರೆ!" ಎಂದು ಬಿಕ್ಕುತ್ತಲೇ ಸುಭದ್ರ ಹೇಳಿದಳು.

"ಏನಾಗಿದೆಮ್ಮಾ ನಿಮಗೆ—ಏನಾಯಿತು ?" ಎಂದು ನಂದಿ ಸಂತೈಸುವ ದನಿಯಲ್ಲಿ ಕೇಳಿದಳು.

ಸುಭದ್ರ ಮಾತಾಡದೆ ಹಾಸಿಗೆಮೇಲುರುಳಿ ನೀರವವಾಗಿ ಅಳತೊಡಗಿದಳು.

...ಸುಭದ್ರಳ ಮದುವೆ ಮಾತು ನಡೆಯುತ್ತಿದ್ದಾಗ ಊರಿಗೆ ಬಂದ ರೋಗ ತಾಯಿ ತಂದೆಯರನ್ನು ಬಲಿ ತೆಗೆದುಕೊಂಡಿತ್ತು. ಆಗ ಭಿಕಾರಿ ಮಕ್ಕಳಂತೆ ಸುಭದ್ರಾ ಮತ್ತು ವಿಶ್ವ ನೆಂಟರಿಷ್ಟರ ಮನೆಗೆ ಅಲೆದಾಡಿದರು. ಬೆಳೆದು ನಿಂತ ಹುಡುಗಿಯನ್ನು ಮನೆಗೆ ಸೇರಿಸಲು ಯಾರೂ ಒಪ್ಪಲಿಲ್ಲ.

ನೆಂಟರಿಷ್ಟರು ಅಂದರೆ ಆಪ್ತರು ಎನ್ನುವುದು ಆಗ ಅವಳಿಗೆ ತಿಳಿಯಿತು !

"ಪಟ್ಟಣಕ್ಕೆ ಹೋಗೋಣ ವಿಶ್ವ. ಅಲ್ಲಿ ಕೂಲಿ ಕೆಲ್ಸಮಾಡಿ ಬದುಕೋಣ!" ಎಂದು ತಮ್ಮ ವಿಶ್ವನನ್ನು ಕರೆದುಕೊಂಡು ಸುಭದ್ರಾ ಪಟ್ಟಣಕ್ಕೆ ಬಂದಿದ್ದಳು.

ಅಕ್ಕ, ತಮ್ಮ, ಮಿಲ್ಲು ಮಿಲ್ಲಿಗೂ ಅಲೆದರು. ಎಲ್ಲೂ ಕೆಲಸ ಸಿಕ್ಕಲಿಲ್ಲ. ಓದಿ ಬರೆದು ಬಲ್ಲವರಾದರೆ ದೊಡ್ಡ ಕೆಲಸ ಸಿಗುತ್ತಿತ್ತಂತೆ. ಯಾರೋ ಹಾಗೆ ಹೇಳಿದ್ದು ಕೇಳಿ ಇಬ್ಬರೂ ಅತ್ತರು. 'ಓದಬೇಕಾಗಿತ್ತು !' ಎಂತ.

ಮುಂದೆ ಯಾರದೋ ಮನೆಯಲ್ಲಿ ಪಾತ್ರೆ ತೊಳೆಯಲು ಹೊರಟಳು ಸುಭದ್ರಾ. ಮನೆಯೊಡತಿ ಅವಳ ರೂಪ ನೋಡಿ ಹೊರಗಟ್ಟಿದಳು. ಅದೇ ಅವಸ್ಥೆಯಾಯಿತು ನಾಲ್ಕು ಕಡೆ. ಬಾಳಲು ಹಾದಿಯಿಲ್ಲದೆ ಸುಭದ್ರಾ ಒದ್ದಾಡಿದಳು. ಪ್ರಪಂಚದ ಜನರ ಮೇಲೆಲ್ಲಾ ಅವಳಿಗೆ ದ್ವೇಷಭಾವ ಮೂಡಿತು ಕಷ್ಟಪಟ್ಟು ದುಡಿದು ಬಾಳುತ್ತೇವೆಂದರೂ ಇವರು ಬಾಳಗೊಡುವುದಿಲ್ಲವಲ್ಲಾ ಎಂದು.

ವಿಶ್ವ ಚಿಕ್ಕ ಹುಡುಗ. ಅಕ್ಕನ ಸೆರಗು ಹಿಡಿದೇ ಇದ್ದರೂ, ವಯಸ್ಸಾದ ಹಿರಿಯನಂತೆ ಮೌನವಾಗಿ ಗಂಭೀರವಾಗಿ ಅವನು ಅಲೆದ. ಹೊಟ್ಟೆ ಅವರನ್ನು ಕಾಡಿಸಿತು.

ಆಗ ಸುಭದ್ರಾಗೆ ಏನಾದರೂ ಮಾಡಿ ಬದುಕಬೇಕೆನ್ನುವ ಛಲ ಬಂತು. ಹೇಗಾದರೂ ಸರಿ ಅಂತೂ ಬದುಕಬೇಕು, ತನ್ನನ್ನಿಷ್ಟು ಕೀಳಾಗಿ ಕಂಡ ಸಮಾಜದೆಡೆಗೆ ಕಠಾರಿ ಹಾಕಿ ಇರಿಯಬೇಕು, ಎಂಬ ಮನೋಭಾವ ತಲೆ ಯೆತ್ತಿ ನಿಂತಿತು. ಇಡೀ ಮೂರು ದಿವಸ ಯೋಚಿಸಿ ಕೊನೆಗೆ ನಿರ್ಧಾರಕ್ಕೆ ಬಂದಳು. "ನನ್ನ ಸರ್ವಸ್ವ ಹೋದರೂ ಚಿಂತೆಯಿಲ್ಲ—ವಿಶ್ವ ಚೆನ್ನಾಗಿ ಓದಿ ಬದುಕಬೇಕು" ಎಂದುಕೊಂಡಳು.

ಕೊನೆಗೆ ಅವಳದಾಗಿ ಉಳಿದಿದ್ದ ಅವಳ ದೇಹ ವಿಕ್ರಯಿಸಿದ್ದಾಯಿತು. ಅವಳನ್ನು ಕಾಲಿನಿಂದ ಒದ್ದವರೇ ಅವಳ ಪದತಲದಲ್ಲಿ ದಾಸರಂತೆ ಹಲ್ಲು ಕಿರಿಯುತ್ತಾ ಬಂದು ಬಿದ್ದರು. ಆ ಒಂದು ಸೇಡು ! ಆ ಸೇಡಿಗಾಗಿ ಸುಭದ್ರಾ ಜೀವನವನ್ನೇ ಬಲಿಗೊಟ್ಟಳು.

ನೂರೆಂಟು ಮನೋಭಾವದ ಜನರನ್ನಾಕೆ ಕಂಡಳು. ಆದರೆ ಅವಳು ಯಾರನ್ನೂ ಪ್ರೀತಿಸಲಿಲ್ಲ. ಆ ಪಶುಗಳಲ್ಲಿ ಪ್ರೀತಿ ಬಯಸುವ ಆತ್ಮವಾದರೂ

ಇತ್ತೆ ?

"ಪ್ರಪಂಚದಲ್ಲೆಲ್ಲಾ ಇಂತಹ ಜನರೇನೆ ? ಒಬ್ಬ ಹೆಂಗಸು ಮಾನವಾಗಿ ಬಾಳಲು ಅವಕಾಶ ಕೊಡದಂತಹ ಮನುಷ್ಯರೇನೆ ?" ಎಂದು ಆಕೆ ಸಾವಿರ ಸಲ ಸವಾಲು ಹಾಕಿದಳು. ಪ್ರತಿಸಲವೂ ಹೌದು ಹೌದು ಎಂಬ ಉತ್ತರವೇ ಬರುತ್ತಿತ್ತು.

ವೇಶ್ಯಾವೃತ್ತಿ ಅವಳು ಬಯಸಿ ಆರಿಸಿದ ವೃತ್ತಿಯಲ್ಲ. ಬದುಕಲೆಂದು ಆಯ್ದ ವೃತ್ತಿ. ಆದರೆ ವೇಶ್ಯೆಯಾದ ಮಾತ್ರಕ್ಕೆ ಅವಳಿಗೂ ಇತರ ಹೆಂಗಸರಲ್ಲಿ ಮಿಡಿಯುವಂತೆ ಮಿಡಿಯಬಲ್ಲ ಒಂದು ಹೃದಯ ಇಲ್ಲವೆ?—ಇತರರಿಗಿರುವಂತೆ ಬಾಳಬೇಕೆನ್ನುವ ಆಸೆಯಿಲ್ಲವೆ ? ಕೊನೆಯವರೆಗೂ ಹೀಗೇ ಆಕೆ ವೇಶ್ಯೆ ಯಾಗಿಯೇ ಬಾಳಬೇಕೆ? ಅವಳಿಗೆ ಬಿಡುಗಡೆಯೇ ಇಲ್ಲವೆ? ಅದೊಂದೇ ಅವಳ ಜೀವಿತದ ಸಾರ್ಥಕ್ಯವೆ? ಹಸಿದ ನಾಯಿಗಳಿಗೆ ತೃಪ್ತಿಕೊಡುವುದಕ್ಕೇ ಅವಳ ಆಯುಸ್ಸು ವಿಶಾಸಲೇ ? ಏನು ?...ತಲೆ ಬಿಸಿಯಾಗುವವರೆಗೂ ಆಕೆ ಯೋಚನೆ ಮಾಡಿದಳು.

ವಿಶ್ವ ಬೆಳೆದು ದೊಡ್ಡವನಾದ ಹಾಗೆ ಅವನ ಮನೋಭಿಪ್ರಾಯಗಳೂ ರೂಪುಗೊಂಡುವು. ತಮಗಾದ ಅನ್ಯಾಯದ ಮೂಲವನ್ನು ಪರಿಶೋಧಿಸ ಹೊರಟ ಸಂಶೋಧಕನಾದ ಆತ. ನ್ಯಾಯದ ಪಕ್ಷಪಾತಿಯಾಗಿ ಹೋರಾಡುತ್ತಾ ಕಲಿತ ಆತ ಕೆಲಸಕ್ಕಾಗಿ ಅಲೆದಾಡಿದ. ಆದರೆ ಅಂತಹವರು ಕೆಲಸಕ್ಕೆ ಅರ್ಹರಲ್ಲ ವಂತೆ. ಕೆಲವರು ಕೆಲಸ ಕೊಡುವೆವೆಂದರು ; ಆದರೆ ಅವನ ಅಕ್ಕನ ಸುಖ ದುಃಖ ವಿಚಾರಿಸುವ ತವಕ ಅವರಿಗೆ! ವಿಶ್ವ ಸಿಡಿದೆದ್ದು ದೂರದ ಊರಿಗೆ ಹೊರಟ. ವಾಪಸ್ ಬರುವ ಹೊತ್ತಿಗೆ ಅಕ್ಕನಿಗೆ ಆ ವೃತ್ತಿಯಿಂದ ವಿಮೋಚನೆ ಯೊದಗಿಸುವ ವಾಗ್ದಾನವಿತ್ತು. ಅವನು ಹೊರಟುಹೋದ.

...ಎಷ್ಟು ಹೊತ್ತು, ಶೃಂಗರಿಸಿಕೊಂಡು ಸುಭದ್ರಾ ಹಾಗೆ ಮಲಗಿ ದ್ದಳೋ—

ಅವಳ ಕೆನ್ನೆಯ ಮೇಲೆ ಮುತ್ತಿನ ಹನಿಗಳಂತೆ ಉದುರುತ್ತಿದ್ದ ಕಣ್ಣೀರು ಮೆಲ್ಲನೆ ಜಾರಿ ಕೆಳಗುರುಳುತ್ತಿತ್ತು. ಕಣ್ಣೀರಿನ ತೇವ ಆರುವ ಮೊದಲೇ ಹೊರಗಡೆ ಕಾಲಿನ ಸಪ್ಪಳ ಕೇಳಿಸಿತು.

ಬಾಗಿಲಿನ ಅಗಳಿ ಹಾಕಿರಲಿಲ್ಲ. ರಾಯರು ಬಾಗಿಲು ನೂಕಿ ನೇರವಾಗಿ

ಒಳಗೆ ಬಂದರು. ನಂದಿಯನ್ನು ಅವರು ಬಿರುಗಣ್ಣಿನಿಂದ ನೋಡಿದಾಗ, ಎದುರಾಡಲು ಸದ್ದು ಹೊರಡದೆ, ನಂದಿ ಎದ್ದು ಹೊರಗೆ ಹೋದಳು. ಸುಭದ್ರಾ "ನಂದೀ—ನಂದೀ—" ಎಂದು ಚೀರಿದಳು. ಆದರೆ ಜೀವನ ನಿರ್ವಹಣಕ್ಕೆ ರಾಯರು ಕೊಡುತ್ತಿದ್ದ ಸಂಬಳವನ್ನೇ ನೆಚ್ಚಿಕೊಂಡಿದ್ದ ನಂದಿ ಒಳಕ್ಕೆ ಬರಲಿಲ್ಲ.

ಬಿಕ್ಕಿ ಬಿಕ್ಕಿ ಅಳುತ್ತಿದ್ದ ಸುಭದ್ರನನ್ನು ಸಂತೈಸಲು ನೋಡಿದರು ರಾಯರು.

"ದೂರ ಹೋಗಿ !" ಎಂದು ಅವಳು ಕಿರುಚಿಕೊಂಡಳು. ಕೋಪದ ಕುಸುಮ ವಾಗಿ ಕಂಡಳು ಅವಳು. ಅದನ್ನು ಹಿಸುಕಿಹಾಕುವ ಮನ ಬಂತೇನೋ ಅವರಿಗೆ, ಭದ್ರವಾಗಿ ಅವಳನ್ನು ಹಿಡಿದಪ್ಪಿದರು—

ಆ ಯಾತನೆ, ಸಂಕಟ ಎಲ್ಲಾ ಮುಗಿದಾದ ಮೇಲೆ ಸುಭದ್ರ ಎದ್ದು ಕುಳಿತಳು. ಆ ದಿನವೆಲ್ಲಾ ಅವಳು ಮಾಡಿದ್ದ ನಿರ್ಧಾರ ಮಣ್ಣುಪಾಲಾಗಿತ್ತು.

ಕಿಟಕಿಯಿಂದ ಒಳಗೆ ಚಂದ್ರಬಿಂಬ ರಾಯರ ಮುಖದ ಮೇಲೆ ಬಿದ್ದಿತ್ತು. ಆ ಮುಖಕ್ಕೆ 'ಥೂ' ಎಂದುಗುಳುವ ಮನಸ್ಸಾಯಿತು ಅವಳಿಗೆ. ಆದರೆ ಬದುಕಲು ಹಾದಿ ? "ಇಲ್ಲ, ವಿಶ್ವ ಬೇಗ ಬರ್‍ತಾನೆ. ಅವನು ಬಂದೊಡನೆ ಈ ಕೆಲಸ ಸಾಕುಮಾಡ್ತೀನಿ" ಎಂದುಕೊಂಡಳು.

ರಾಯರು ಹೊರಟುಹೋದ ಮೇಲೆ ನಂದಿ ಒಳ ಬಂದಳು. ಹಾಸಿಗೆಯ ಮೇಲೆಹೊರಳಾಡುತ್ತಿದ್ದಳು ಸುಭದ್ರಾ. ಮೈ ಕೆಂಡವಾಗಿತ್ತು. "ವಿಶ್ವಬರ್‍ತಾನೆ, ಬೇಗ ಬರ್‍ತಾನೆ. ಬರೋವರೆಗೆ ಬದುಕಿರ್‍ಬೇಕು ಹ್ಯಾಗಾದರೂ" ಎಂದು ಅವಳು ತೊದಲುತ್ತಲೇ ಇದ್ದಳು.

* * *

"ಕೂ...ಕೂ..."—ಎಂದು ಕರ್ಕಶವಾಗಿ ಕಾರ್ಖಾನೆಯ ಸಿಳ್ಳಿನ ಧ್ವನಿ ಕೇಳಿಸುತ್ತಿತ್ತು. ನಿದ್ದೆ ಹರಿದು ಲಚುಮಿ ಕಣ್ಣು ಹೊಸಕಿ ಎದ್ದು ಕುಳಿತಳು. ಮೇಲೆದ್ದು, ಹರಿದು ಚಿಂದಿಯಾಗಿದ್ದ ಸೀರೆಯನ್ನು ಕೊಡವಿಕೊಂಡಳು. ಇದ್ದ ನೆರಿಗೆಯನ್ನು ಸರಿಪಡಿಸಿ ಮುಖವನ್ನು ಮುಸುಕಿದ್ದ ಒರಟು ಕೂದಲನ್ನು ಹಿಂದೆ ಸರಿಸಿ ಗಂಟು ಹಾಕಿದಳು.

"ಏಳು—ಒತ್ತಾಯ್ತು, ಒತ್ತಾಯ್ತು, ಮಿಲ್ಲಿಗೇ !" ಎಂದು ನಂಜನನ್ನು ತಟ್ಟಿ ಎಬ್ಬಿಸಿದಳು. ತಂದೆ ತಾಯಿಗಳ ಗದ್ದಲ ಕೇಳಿ ಆ ಐದು ಮಕ್ಕಳೂ

ಎದ್ದು ಕುಳಿತರು.

"ಅಪ್ಪಾ...ಮುದ್ದೆ ಅಪ್ಪಾ...ಮುದ್ದೇ!" ಎಂದು ಜತೆಯಾಗಿ ಒರಲ ತೊಡಗಿದುವು.

ಸುರಿಯುತ್ತಿದ್ದ ಜೊಲ್ಲು, ಕಣ್ಣಿಂದ ಇಳಿದುಬರುತ್ತಿದ್ದ ಗೀಜು, ಮೂಗಿನಿಂದ ಸೋರಿಬರುತ್ತಿದ್ದ ನೀರು, ಮುಖದ ಮೇಲೆ ಬಿದ್ದಿದ್ದ ಧೂಳು, ತುಂಬಿದ ಕೂದಲು, ಎಲ್ಲವನ್ನೂ ಹಾಗೇ ಒರೆಸಿ ತಿನ್ನುವ ಆತುರದಿಂದಮಕ್ಕಳುಕುಳಿತರು

ಲಚುಮಿ ಮುದ್ದೆ ತುಂಬಿಟ್ಟಿದ್ದ ಮಡಕೆ ಹೊತ್ತು ತಂದು ಎಲ್ಲರಿಗೂ ಇಟ್ಟು ತಾನೂ ಒಂದು ಚೂರು ಕೊರಕುತ್ತಾ ಕುಳಿತಳು. ಇದ್ದಾಗ ಅಷ್ಟೇ ಅವರ ಪಾಲಿಗೆ ಮೃಷ್ಟಾನ್ನ ಭೋಜನ. ಊಟದ ಶಾಸ್ತ್ರ ಮುಗಿಸಿ, ಗುಡಿಸಲು ಬಾಗಿಲು ರಪ್ಪನೆ ತೆಗೆದು ಲಚುಮಿ, ಅವಳ ಹಿಂದೆ ನಂಜ, ಹೊರಗೆ ಬಂದರು. ಅಭ್ಯಾಸಬಲದಿಂದ ಅವರ ಕಾಲುಗಳು ಮಿಲ್ಲಿನ ಕಡೆಗೆ ತಿರುಗಿದುವು.

ಲಚುಮಿಯು ಪಕ್ಕದಲ್ಲೇ ನಂಜ; ರಾತ್ರಿ ಅರ್ಧ ಸೇದಿಟ್ಟಿದ್ದ ಬೀಡಿ ಸೇದುತ್ತಾ ನಡೆದಿದ್ದ. ಅವಳು ತಿರುಗಿ ಅವನ ಕಡೆ ನೋಡಿದಳು. ಅವನ ತಾರುಣ್ಯದ ಮೈ ದುಡಿದು ಬಳಲಿಹೋಗಿತ್ತು. ಕಪ್ಪಾದ ಮುಖ—ಹಣೆ, ಬೆವರು ಸುರಿಸಿ ಸುರಿಸಿ ಕಾಡಿಗೆಗಿಂತ ಕಪ್ಪಾಗಿ ಹೋಗಿದ್ದುವು. ಆ ಮುಖವನ್ನು, ಹತ್ತು ವರ್ಷದ ಹಿಂದೆ ಇದ್ದ ಆ ಮುಖವನ್ನು, ನೆನೆಸಿಕೊಂಡಳು. ತಾರುಣ್ಯದ ತುಂಬು ಮೆಟ್ಟಿಲು ಹತ್ತಿ ನಿಂತಿದ್ದ ನಂಜನನ್ನು ಮೊದಲ ಬಾರಿ ಕಂಡೇ ಪ್ರೇಮಿಸತೊಡಗಿದ್ದಳು ಲಚುಮಿ. ಮನೆಯವರು ಒಪ್ಪದೆ ಹೋದಾಗ, ಇಬ್ಬರೂ ಕೂಡಿ ಓಡಿ ಬಂದರು ಪಟ್ಟಣಕ್ಕೆ. ಕೆಲಸವೇನೋ ಸಿಕ್ಕಿತು. ಆದರೆ ಆ ನರಕದ ಯಾತನೆ, ಕಣ್ಣೀರು ಸುರಿಸಿ, ಸುರಿಸಿ, ತಿನ್ನುವ ಆ ಕೂಳು...ಎಲ್ಲವೂ ಅವಳಲ್ಲಿ ಜಿಗುಪ್ಸೆಯುಂಟುಮಾಡಿದ್ದುವು.

ಸುಖವಾಗಿ ಬದುಕಿ ಬಾಳುವ ಆಸೆಯಿಂದ, ಅವಳು ಓಡಿ ಬಂದಿದ್ದಳು ನಂಜನ ಜೊತೆಗೆ. ವರ್ಷವರ್ಷಕ್ಕೂ, ಒಬ್ಬೊಬ್ಬರಾಗಿ, ಆ ಬಡತನದಲ್ಲೂ ಎಡೆಬಿಡದೆ ಆ ಐದು ಮಕ್ಕಳು ಹುಟ್ಟಿದರು. ಅದೇನು ಸುಖ ಬಯಸಿ ಹುಟ್ಟಿದರೋ ಏನೋ!

ಶ್ರೀಮಂತಿಕೆಯು ಸೋಗುಹಾಕಿದ ಕೆಲವು ಜನ ಬಡವರ ಹೆಂಡ ಎಂದರೆ 'ಥೂ' ಎಂದು ಉಗುಳುತ್ತಾರೆ. ಆದರೆ ಲಚುಮಿ-ನಂಜರ ಪಾಲಿಗದು ಅಮೃತ.

ಅದಕ್ಕಿಂತ ಏಂಗಿಲಂ.

ಬೆಳಗಿನಿಂದ ಸಂಜೆಯಂವರೆಗೆ ಅರೆಹೊಟ್ಟೆಯಲ್ಲಿ ದುಂಡಿದಾದ ಮೇಲೆ, ಆ ನರಕಯಾತನೆಯನ್ನು ಕ್ಷಣಮಾತ್ರವಾದರೂ ಮರೆಯಲಂ ಸಹಾಯಂಕವಾಗಂತ್ತಿತ್ತು ಆ ಹುಳಿಹೆಂಡ. ಅದೂ ಇಲ್ಲದೆ ಹೋಗಿದ್ದರೆ ಆ ಕೋಟಿ ಸಂಕಷ್ಟಗಳ ಮಧ್ಯೆ ಅವರು ಬಾಳುತ್ತಿದ್ದರೋ ಇಲ್ಲವೋ!

ಹಳ್ಳ ಏರಿ ಇಳಿಯುವ ಹೊತ್ತಿಗೆ ಹಲವಾರು ಜತೆ ಕೂಲಿಗಾರ್ತಿಯರಂ ಓಡಿ ಬಂದರಂ.

''ಓ...ಲಚಂಮಿಾ!'' ಎಂದು ಕೂಗಿ ಕರೆದರಂ. ಲಚುಮಿ ನಿಂತಳು. ನಂಜ ಮುಂದೆ ಹೋದ.

ಮಿಲ್ಲಿನ ಒಳಗೆ ಅವರು ಬಂದಾಗ ತುಂಬಾ ನೂಕು ನುಗ್ಗಲು. ಅದರಲ್ಲೇ ನುಗ್ಗಿ ಜಾಗ ಮಾಡಿಕೊಂಡು ಲಚುಮಿ ಹೊರಟಳು. ಆ ಎರಡು ದಾರಿ ದಾಟಿ, ಮೂರನೆಯ ಕೊಠಡಿಯ ಬಳಿ ಎಡಕ್ಕೆ ತಿರುಗಿ, ತನ್ನ ಕೆಲಸದ ಜಾಗವನ್ನು ಲಚುಮಿ ತಲುಪಿದಳು.

ದಿನಕ್ಕಿಂತ ಹೆಚ್ಚಿನ ಕೆಲಸ ಅಂದು. ಮುಂಜಾವದಿಂದಲೇ ಲಚಂಮಿಗೆ ಯಾಕೋ ಮೈ ಕೈ ನೋವು. ಮುಂದೆ ಬಿದ್ದಿದ್ದ ಹೊರೆಯಷ್ಟು ಹತ್ತಿ ನೋಡಿ ಅವಳ ಮೈ ಕಂಪಿಸಿತಂ.

''ಥೂ...ಇವನ ಮನೆ ಹಾಳಾಗ!'' ಎಂದು ಶಪಿಸಿದಳು. ಆದರೆ ಮಾಡದ ಹೊರತು ಬೇರೆ ಗತಿ ಇರಲಿಲ್ಲ. ಅವಳು ಕೂಲಿಯಾಳು ಎಂಬುದನ್ನು ನಿಮಿಷ ನಿಮಿಷವೂ ಮೇಸ್ತ್ರಿ ಅರಿವು ಮಾಡಿಕೊಟ್ಟು ಹೋಗುತ್ತಿದ್ದ.

ಮಧ್ಯಾಹ್ನದ ಬಿಡುವಿನ ವೇಳೆಯಲ್ಲಿ ಪಕ್ಕದಲ್ಲಿದ್ದಾಕೆಯ ಬಳಿ ಎಲೆಯಡಕೆ ಇಸಿದು ಹಾಕಿಕೊಂಡಾಗ ಹಸಿವು ಎಷ್ಟೋ ಇಂಗಿದ ಹಾಗಾಯಿತಂ. ಹಾಗೇ ಒಂದು ಗಳಿಗೆ ಒರಗುವ ಯೋಚನೆ ಮಾಡುವ ಹೊತ್ತಿಗೇ ಕಾರ್ಖಾನೆಯ ಸಿಳ್ಳಾಯಿತಂ. ಮತ್ತೆ ಕೆಲಸಕ್ಕೆ...

ಕೆಲಸದ ಮಧ್ಯೆ ಮನೆಯ ಕಡೆ ಯೋಚನೆ ಹರಿಯಿತು. 'ಮುರಿದು ಹೋಗಿದ್ದ ಗುಡಿಸಲು ಸರಿಪಡಿಸಬೇಕು. ತಾನುಟ್ಟ ಸೀರೆ ತೀರಾ ಚಿಂದಿ ಚಿಂದಿಯಾಗಿದೆ. ಒಂದು ಶ್ಯಾಲೆ ಕೊಂಡುಕೋಬೇಕು. ಮಕ್ಕಳಿಗೆಲ್ಲಾ ಅಂಗಿ! ಆಮೇಲೆ 'ಹಿರಿಯ ಹುಡುಗನ್ನ ಶಾಲೆಗೆ ಸೇರಿಸಬೇಕೆಂದಿದ್ದಾರೆ ಗ್ರಾಮೋದ್ಧಾರ

ಕರು. ಅಯ್ಯೋ ನಮ್ಮಂತೋರ ಮಕ್ಕಿಗೆ ವಿದ್ಯೇನೇ ? ಬುದ್ಧಿಯೋ ? ಏನು ? ಅಣವಿದ್ದೋರ್ಗೆ ಆ ಮಾತು. ಎಷ್ಟಾಸೆ ಇದ್ರೂವೆ ನಮ್ಮಂತ ಪಾಪಿ ಪರದೇಸಿಗಳ ಮುಕ್ಳಾಗಿ ಉಟ್ಟಿದ ತಪ್ಗೆ, ಅವ್ರು ನಮ್ಮಾಗೇ ಕೂಲಿಗಾಗಿ ಸಾಯ್ಬೇಕು... ಏನೇನಾಕ್ತದೋ ಆಗ್ಲಿ...ಆಗ್ಲಿ...'

ಮನೆಯ ಕಡೆ ಹೊರಟಾಗ ತುಂಬಾ ಆಯಾಸವಾಗಿತ್ತು ಅವಳಿಗೆ.

'ನಾನ್ಯಾಕೆ ಬೇಗ ಸ್ವಾಮಿಪಾದಾ ಸೇರ್ಬಾರ್ದು?' ಎಂಬ ಯೋಚನೆ ಬಂತು ಒಮ್ಮೆ.

ನ್ಯಾಯ ಎಲ್ಲಿದೆ ಪ್ರಪಂಚದಲ್ಲಿ ? ಲಚುಮಿ ಬೆಳಗಿನಿಂದ ಸಂಜೆಯ ತನಕ ದುಡಿದರೂ ಅವಳ ಹೊಟ್ಟೆ ತುಂಬುವಷ್ಟು ಕೂಡಾ ಸಂಪಾದನೆ ಆಗ್ತಾ ಇಲ್ಲ. ಆದರೆ ಶ್ರೀಮಂತರು ಏನು ಕೆಲಸ ಮಾಡದಿದ್ದರೂ ಸಂತೋಷವಾಗಿರುವ ದೃಶ್ಯ ! ಹೊಟ್ಟೆ ತುಂಬಾ ಊಟ, ಅವರಿಗೆ ಉಡಲು ತೊಡಲು ಅಂದವಾದ ಬಟ್ಟೆಬರೆ...

ರೊಯ್ ಎಂತ ಒಂದು ರೋಲ್ಸ್‌ರಾಯ್ ಕಾರು ಅವರನ್ನು ಹಾದು ಹೋಯಿತು. ಮಿಲ್ಲಿನ ಮ್ಯಾನೇಜರ್ ಕಾರು ನಡೆಸುತ್ತಿದ್ದ. ಅವನ ಮುದ್ದಾದ ಇಬ್ಬರು ಮಕ್ಕಳು, ಎರಡೂ ಕಡೆಯಲ್ಲಿ ನಡೆದು ಹೋಗುತ್ತಿದ್ದ ಕೂಲಿಗಾರರನ್ನು ನೋಡಿ ನಗುತ್ತಾ ಕುಳಿತಿದ್ದುವು.

ಲಕ್ಷಣವಾದ ಮಕ್ಕಳು. ಅಂದಚೆಂದದ ಉಡುಗೆಯಿಂದ ಇನ್ನೂ ರಂಗಾಗಿ ಶೋಭಿಸುತ್ತಿದ್ದುವು. ಒಂದು ಗಳಿಗೆ ತನ್ನ ಮಕ್ಕಳನ್ನು ನೆನೆಸಿಕೊಂಡಳು. ಲಚುಮಿ...ತಾಯಿ ಬರುವುದನ್ನೆ ಅವು ಕಾದು ಕುಳಿತಿವೆ ಆ ಗುಡಿಸಿಲಿನಲ್ಲಿ.

ತನ್ನ ಮಕ್ಕಳು ಮಾಡಿದ ಅನ್ಯಾಯವೇನು ? ಇವರು ಮಾಡಿದ ಪುಣ್ಯವೇನು? ಪಕ್ಕದಲ್ಲೇ ಬರುತ್ತಿದ್ದ ನಂಜನನ್ನು ತಿವಿದು ''ನೋಡ್ಲಾ...'' ಎಂದು ಹೇಳಿದಳು.

ನಂಜ ತಲೆಯೆತ್ತಿ ದೂರ ಸಾಗಿದ್ದ ಕಾರಿನತ್ತ ನೋಡಿದ. ವಿಷಾದದ ಛಾಯೆಯೊಂದು ಅವನ ಮುಖದ ಮೇಲೆ ಹಾದುಹೋಯಿತು.

''ಎಷ್ಟು ದಿನದಿಂದ್ಲೂವೇ ದುಡೀತಿದೀವಿ, ಒಂದಿನ ಮುಕ್ಳು ಒಟ್ಟೆ ತುಂಬಾ ಅನ್ನ ಕಾಣ್ಲಿಲ್ಲ'' ಎಂದು ಪ್ರಯಾಸದಿಂದ ಲಚುಮಿ ಹೇಳಿದಳು. ''ಇಂಗೇನಾ ಕಡೆವರ್ಗೂ—ಆ ?''

ಮುಂದಿನದನ್ನು ತಿಳಿಸಲು ಸಂಜನೇನು ಭವಿಷ್ಯಗಾರನೆ ?

ಲಚುಮಿ ಮಾತು ನಿಲ್ಲಿಸಿ ತುಂಬಕ್ಕನೆ ಎಂಜಲು ಉಗುಳಿದಳು. ದಿಬ್ಬ ಹತ್ತುತ್ತಾ, ಹತ್ತುತ್ತಾ, ಏದುಸಿರು ಕರೆಯುತೊಡಗಿತು. ಉಸಿರು ಕಟ್ಟಿ ಮುಂದೆ ಮಾತಾಡಲಾಗಲಿಲ್ಲ ಆಕೆಗೆ. ಗುಡಿಸಲು ಸಮೀಪಿಸಿತು. ಅದುವರೆಗೂ ಅವಳ ಮುಖದಲ್ಲಾಗುತ್ತಾ ನಡೆದಿದ್ದ ಬದಲಾವಣೆಗಳನ್ನು ನೋಡುತ್ತಾ ಬರುತ್ತಿದ್ದ ನಂಜ ಯಾವುದೋ ವಿಶ್ವಾಸದಿಂದ ಅವಳ ಕೈಹಿಡಿದೊತ್ತಿದ. "ಯಾವತ್ತಾದ್ರೂ ಒಮ್ಮೆ ಒಳ್ಳೇ ಕಾಲ ಬರ್ತದೆ ಲಚುಮಿ ?'' ಎಂದು ಪಿಸುಗುಟ್ಟಿದ.

ಎದುರಿಗೆ ಆ ಐದು ಮಕ್ಕಳೂ ಓಡಿ ಬರುತ್ತಿದ್ದುವು. ಹೊಲಸು ವಾಸನೆ, ನೀರಿಲ್ಲದೆ ನಾರಿದ ಮೈ, ಸಿಂಬಳ ಸುರಿಯುತ್ತಿದ್ದ ಮೂಗು, ಇವೆಲ್ಲದರಲ್ಲೂ ಕೂಡ ಆ ಮಕ್ಕಳ ಕಣ್ಣಲ್ಲಿ ಏನೋ ಅವ್ಯಕ್ತ ಕಳೆ ಮಿನುಗುತ್ತಿದೆಯೆಂದು ಲಚುಮಿಗೆನಿಸಿತು. ಮೊದಲು ತನ್ನನ್ನು ತಲುಪಿದ ಮಗುವನ್ನು ತುಂಬು ಪ್ರೀತಿಯಿಂದ ಆಕೆ ಅಪ್ಪಿಕೊಂಡಳು.

* * *

ನೆನಪಿಗೆ ಬಲಿಯಾಗಿ ಮೂಡಿದ ಕಥಾನಕ — ಆ ಮೂರು ಮನೆಗಳ ಇತಿಹಾಸ ..

ಆ ಮೂರು ಮನೆಗಳ ಅಂತಸ್ತು, ಘನತೆ, ಗಾಂಭೀರ್ಯ ಎಲ್ಲಾ ಬೇರೆ ಬೇರೆ. ಆದರೆ ಆ ಜೀವಿಗಳ ಮನದ ಮಿಡಿತ ? ಹೊಸತನಕ್ಕಾಗಿ ಕಾದು ಕುಳಿತ ಅವರ ಹೃದಯದ ಕಾವು ? ಒಂದೇ ! ಒಂದೇ !! ಆ ಮೂವರ ನೋವು ಆ ಮೂರು ಮಂದಿಯದೇ ಅಲ್ಲ. ಇಡೀ ಸ್ತ್ರೀ ಸಮಾಜದ ನೋವು ವೇದನೆಯ ಮೂರು ರೂಪ ಅವು.

ಸೂರ್ಯ ಆದೇ ತಾನೆ ಉದಯಿಸುತ್ತಿದ್ದ. ಅವನ ಕೆಂಪಿನ ಬಂಗಾರದ ರಶ್ಮಿ ಆ ಮೂರು ಮನೆಗಳ ಮೇಲೂ ಮೆಲುವಾಗಿ ಹರಡಿ ನರ್ತಿಸುತ್ತಿದ್ದಂತೆ ಭಾಸ ವಾಯಿತು. ಆದರೆ—

ಅನ್ಯಾಯ ದಬ್ಬಾಳಿಕೆಗಳನ್ನು ದೂರ ಸರಿಸಬೇಕೆಂದು ಹಾತೊರೆದರೂ ಹೆದರಿಕೆಯಿಂದ ಹಿಂಜರಿಯುವ ಭಾಗ್ಯಮ್ಮ—

ಸಮಾಜದ ಕ್ರೂರ ಸವಾಲಿಗೆ ಉತ್ತರವಾಗಿ ಬದುಕಿ, ಅಂಥ ಹೊಡೆತ ಗಳಲ್ಲೂ ತಲೆಯೆತ್ತಿ ನಿಲ್ಲಲಾಶಿಸುವ ಸುಭದ್ರಾ—

ದಿನವೆಲ್ಲಾ ದುಡಿದರೂ ಹೊಟ್ಟೆ ತುಂಬುವ ಮಾರ್ಗ ಕಾಣದೆ ಮಾಲೀಕರ ಅನ್ಯಾಯ ಕಂಡು ರೋಸಿ, ಮುಂಬರುವ ಹೊಸ ರಾಜ್ಯಕ್ಕಾಗಿ ಕಾದು ಕುಳಿತ ಲಚುಮಿಯಾ—

ಇವರೆಲ್ಲರ ಜೀವನದಲ್ಲಿ ರವಿ ಉದಯಿಸುವುದೆಂದಿಗೆ ? ಅವರ ಬಾಳಿನಲ್ಲಿ ಬೆಳಕು ಹರಿಯುವುದೆಂದಿಗೆ ?

ಡಿಸೆಂಬರ್, ೧೯೫೧

# ಒಂದೇ ಜಾತಿ

ಒಂದು, ಎರಡು, ಮೂರು...ಹತ್ತು.

ಹತ್ತು ಪತ್ರಗಳಾದವು ಒಟ್ಟು. ಕಾವೇರಮ್ಮ ದಿನದಿನವೂ ಎಣಿಸುತ್ತಿದ್ದಳು. ಆಶ್ಚರ್ಯದಿಂದ ಪತ್ರಗಳನ್ನು ದಿಟ್ಟಿಸಿ ನೋಡುತ್ತಿದ್ದಳು. ಆವಳಿಗೇನೂ ಅರ್ಥವಾಗಲಿಲ್ಲ.

''ಈ ಪತ್ರಗಳು ಯಾರವು ?'' ಎಂಬ ಕಾತರ ಮಾತ್ರ ಮನಸ್ಸಿನಲ್ಲಿ ಬೆಳೆಯಿತು.

ಲಕ್ಷ್ಮೀಪತಯ್ಯ ದಿನವೂ ಶಾಲೆಯಿಂದ ಬಂದೊಡನೆ, ''ಕಾಗದ ಯಾವುದಾದ್ರೂ ಬಂದಿದೆಯೇನೆ?" ಎಂದು ಆತುರದಿಂದ ಕೇಳುತ್ತಿದ್ದರು. ಆಕೆ ಟಪಾಲು ತಂದುಕೊಡುತ್ತಿದ್ದಳು, ಬೇಕಂತಲೇ ಆಕೆ ಅತಿ ಚಾಣಾಕ್ಷತನದಿಂದ ಅವರು ಓದುವುದನ್ನೇ ಗಮನಿಸುತ್ತಿದ್ದಳು. ಅದನ್ನು ಓದುವಾಗ ಅವರ ಮುಖಚರ್ಯೆ ಬದಲಾಗುತ್ತಿತ್ತು. ಸಾಧಾರಣವಾಗಿ ಕಠಿನ ಗಂಭೀರತೆಯಿಂದ ತುಂಬಿದ ಆ ಮುಖ ಬರುಬರುತ್ತಾ ದಯಾಪೂರಿತವಾದಂತೆ ಅವಳಿಗೆ ತೋರತೊಡಗಿತು.

ಹನ್ನೊಂದನೆಯ ಕಾಗದ ಬಂದಾಗ ಕವರಿನ ಅಡ್ರೆಸ್ಸಿನ ಕಡೆಗೆ ಕಣ್ಣೋಡಿಸಿದಳು ಆಕೆ. ಅಕ್ಷರ ಅರ್ಥವಾಗದಿದ್ದರೂ ಅದು ಮುದ್ದಾಗಿದೆಯೆಂದು ಅವಳಿಗೆ ಗೊತ್ತಾಯಿತು.

''ಯಾರಾದರೂ ಹೆಂಗಸಿನ ಅಕ್ಷರವಿರಬಹುದೆ ?'' ಎಂಬ ಸಂಶಯ ಮನವನ್ನು ಹಣಿಕಿತು.

"ಹೌದು, ಅದಕ್ಕೇ ಇರಬೇಕು, ಅವರು ಅಷ್ಟು ಆತುರದಿಂದ ಓದೋದು!" ಎಂದುಕೊಂಡಳು. ಸಂಶಯದ ಕಿಡಿ ಬಲಗೊಂಡು ಹೃದಯವನ್ನು ಸುಡತೊಡಗಿತು.

ಸಾಮಾನ್ಯವಾಗಿ ಶಾಲೆಯಲ್ಲಿ ದುಡಿದು ಬಂದ ಲಕ್ಷ್ಮೀಪತಯ್ಯ ಮನೆಯಲ್ಲಿ ಕಾವೇರಿಯ ಮೇಲೆ ಹರಿಹಾಯುತ್ತಿದ್ದರು, ಮುದ್ದು ಮಗಳು, ಎಂಟು ವರ್ಷದ ನರ್ಮದೆ ನಗುನಗುತ್ತಾ ಬಂದು ತಂದೆಯನ್ನಪ್ಪಿದರೆ ರೇಗಿ ದೂರ ಸರಿಸುತ್ತಿದ್ದರು. 'ಹೊರಗೆ ಕರೆದುಕೊಂಡು ಹೋಗು' ಎಂದು ಮಗಳು

ದುಂಬಾಲು ಬಿದ್ದಾಗ, ಹೊಡೆದು ಕಾವೇರಿಯ ವಶಕ್ಕೆ ಕೊಟ್ಟು ಹೋಗು ತ್ತಿದ್ದರು. ಯಾವಾಗಲೂ ಅತೃಪ್ತಿ, ಬೇಸರದ ವಾತಾವರಣ—ಸದಾಕಾಲವೂ ಜೀವನದ ಬಗ್ಗೆ ಜಿಗುಪ್ಸೆ ತೋರುವ ಹುಳಿಮುಖ...ಇವನ್ನೆಲ್ಲಾ ಕಾವೇರಿ ನೆನೆದುಕೊಂಡಳು. ಆದರೆ ಈಗ? ಆ ಪತ್ರಗಳು ಬರತೊಡಗಿದ ಮೇಲೆ ಎಂಥ ಬದಲಾವಣೆ ಆಯಿತು ಅವರಲ್ಲಿ. ಮುಖ, ನಗುಮುಖವಾಗುತ್ತಿತ್ತು. ಮೆಲ್ಲ ಮೆಲ್ಲನೆ ಆ ಸಿಡುಕು ನೋಟ, ಬೇಸರದ ಕಿಡಿನುಡಿ, ದೂರ ಸರಿದು, ಪ್ರೇಮ ಪೂರಿತ ನೋಟ, ಆತ್ಮೀಯ ಮಾತುಗಳು, ತಲೆದೋರುತ್ತಿದ್ದುವು.

ಪತಿಯ ಮಹತ್ತರ ಬದಲಾವಣೆ ಅವಳಿಗೊಂದು ದೊಡ್ಡ ಸಮಸ್ಯೆ. ಯಾಕೆ ಇಷ್ಟು ಪ್ರೀತಿಯ ಉಪಚಾರ ಈಗ? ಬಹುಶಃ ತಮ್ಮನ್ನು ಬಿಟ್ಟುಹೋಗ ಲೆಂದೋ ಈ ಪ್ರೀತಿಯ ನಟನೆ?

ಆಮೇಲೆ...? ತನ್ನ ಮತ್ತು ಮುದ್ದುಕುಮಾರಿ ನರ್ಮದೆಯ ಗತಿ? ತಮಗಾರು ಗತಿ?...ಅಷ್ಟಕ್ಕೆ ಅವಳ ಕಣ್ಣಲ್ಲಿ ನೀರು ತುಂಬುತ್ತಿತ್ತು.

ಈ ಎಲ್ಲ ಹೊಯ್ದಾಟ ಎದುರಿಸಿ ಕಡೆಗೊಂದು ದಿನ ಪತಿಯನ್ನು ಕೇಳಿಯೇ ಬಿಡಬೇಕೆಂದು ನಿರ್ಧರಿಸಿದಳು. ಒಂದು ದಿನ ಲಕ್ಷ್ಮೀಪತಯ್ಯ ಶಾಲೆಯಿಂದ ಬಂದು ರಾತ್ರಿಯವರೆಗೆ ಆ ಪತ್ರಗಳನ್ನೆಲ್ಲಾ ಮತ್ತೊಮ್ಮೆ ಓದುತ್ತಿದ್ದುದನ್ನೆ ಅವಳು ನೋಡಿದಳು. ಅವಳ ಮೈ ಜುಮ್ ಎಂದಿತು.

ಅಂದಿನ ಊಟವೂ ಮೌನವಾಗಿಯೇ ಸಾಗಿತು. ಲಕ್ಷ್ಮೀಪತಯ್ಯ ಏನೋ ಯೋಚನೆಯಲ್ಲಿ ಮುಳುಗಿದ್ದಂತೆ ಅವಳಿಗನಿಸಿತು. ಆಕೆ ಊಟ ಮುಗಿಸಿ, ಅಡುಗೆ ಮನೆಯ ಕದವೆಳೆದುಕೊಂಡು ಬಂದಾಗ, ಅವರಿನ್ನೂ ದೀಪದ ಬೆಳಕಿ ನಲ್ಲಿ ಓದುತ್ತಲೇ ಇದ್ದರು. ಮೆಲ್ಲನೆ ಅವಳು ಗಂಟಲು ಸರಿಮಾಡಿಕೊಂಡು. "ಯಾರ ಕಾಗದ ಅವು?" ಎಂದು ಕೇಳಿದಳು.

"ನಿನಗ್ಯಾಕೆ ಹೆಂಗಸ್ಗೆ?" ಎಂದು ಅವರು ಅಂದುಬಿಡಬಹುದೆಂಬ ಭೀತಿ ಇದ್ದೆ ಇತ್ತು. ಆದರೆ ಅವರು ಹಾಗೆ ಹೇಳಲಿಲ್ಲ. ಮೊದಲು ನಕ್ಕು ಆಮೇಲೆ ಉತ್ತರವಿತ್ತರು:

"ನೋಡು ಕಾವೇರೂ, ನಿನಗಿಷ್ಟು ದಿನ ಹೇಳೀ ಇರಲಿಲ್ಲ. ಇವೆಲ್ಲಾ ರಾಜಣ್ಣನ ಕಾಗದಗಳು!"

"ಯಾವ ರಾಜಣ್ಣ?" ಎಂದಾಕೆ ಪ್ರಶ್ನಿಸುವ ಕಣ್ಣುಗಳಿಂದ ನೋಡಿದಳು.

"ಆತ ಬೆಂಗಳೂರಿನಲ್ಲಿದ್ದಾನೆ—ಫ್ಯಾಕ್ಟರಿಯಲ್ಲಿ ಕೆಲಸ!"

ಇನ್ನೂ ಏನೇನೋ ರಾಜಣ್ಣನ ಬಗ್ಗೆ ಹೇಳಿದರು ಅವರು. ಕಾವೇರಮ್ಮ 'ಆ' ಎಂದು ತೆರೆದ ಬಾಯಿ ಮುಚ್ಚದೆಯೇ ಆ ಮಾತುಗಳಿಗೆ ಕಿವಿಗೊಟ್ಟಳು.

* * *

ಲಕ್ಷ್ಮೀಪತಯ್ಯನವರಿಗೆ ರಾಜಣ್ಣನ ಪರಿಚಯವಾದದ್ದು ತುಂಬಾ ಆಕಸ್ಮಿಕ ವಾದ ರೀತಿಯಲ್ಲಿ.

ಫ್ಯಾಕ್ಟರಿಗೆ ಹೊರಟ ರಾಜಣ್ಣ ಹೊತ್ತಾಯಿತೆಂದು ಬೇಗ ಬೇಗ ಸರ್ಕಲ್ಲಿಗೆ ಓಡಿ ಬಂದ. ಬಸ್ಸು ಬಂದಿರಲಿಲ್ಲ. ನಿಂತು ನಿಂತು ಕಾಲು ಬೇರೆ ನೋಯು ತೊಡಗಿತ್ತು. ತಾಯ್ತಂದೆಯರಿಲ್ಲದ ಒಂಟಿ ಜೀವಿ ರಾಜಣ್ಣ. ಮುಂಜಾವದಲ್ಲೇ ಎದ್ದು ಅಡುಗೆ ಮಾಡಿ, ಬುತ್ತಿ ಕಟ್ಟಿಕೊಂಡು ಬಂದಿದ್ದ. ಒಂದು ಗಳಿಗೆ ಹಾಯಾಗಿ ಕೂಡೋಣ ಎಂದುಕೊಂಡು ಟಿಫಿನ್ ಕ್ಯಾರಿಯರ್ ಕೆಳಕ್ಕಿರಿಸಿ, ಅಲ್ಲೇ ಇದ್ದ ಕಲ್ಲುಬೆಂಚಿನ ಮೇಲೆ ಕುಳಿತ.

ಏದುಸಿರು ಕರೆಯುತ್ತಾ ನಡುವಯಸ್ಸಿನ ಒಬ್ಬರು, ಪಂಚೆ ಮೇಲಕ್ಕೆ ಹಿಡಿದುಕೊಂಡು, ಆಗ ಓಡಿಬಂದರು.

"ಹನ್ನೊಂದನೇ ನಂಬರ್ ಬಸ್ಸು ಹೊರಟುಹೋಯಿತೇನ್ರಿ?" ಎಂದು ಕೇಳಿದರು.

"ಇನ್ನೂ ಇಲ್ಲ."

ಆ ಉತ್ತರ ದೊರೆತಾಗ ಬಂದವರ ಮನಸ್ಸಿಗೆ ನೆಮ್ಮದಿ ಎನಿಸಿತು—ನಿಟ್ಟು ಸಿರು ಬಿಟ್ಟರು ಆತ. ಪೇಟ ತೆಗೆದು ಕೋಟಿನ ಜೇಬಿನಿಂದ ಕೊಳಕು ಕರವಸ್ತ್ರ ವೊಂದನ್ನು ಹೊರಕ್ಕೆಳೆದು, ಪೂರ್ತಿ ಒರೆಸಿಕೊಂಡರು. ಹಾಗೇ ಮುಖದ ಮೇಲೆ ಇಳಿದು ಬರುತ್ತಿದ್ದ ಬೆವರನ್ನು ಅಳಿಸಿದರು.

"ಆತ ಮತ್ತೆ ಪೇಟ ಇಟ್ಟುಕೊಂಡು ಬೆಂಚಿನ ಮೇಲೆ ಕುಳಿತಾಗ, ರಾಜಣ್ಣ "ಅವಸರವಾಗಿ ಹೊರಟಂತಿದೆ" ಎಂದ.

"ಹೌದು...ಸಾಹೇಬ್ರು ಆಫೀಸ್ಗೆ ಹೋಗ್ಬೇಕಾಗಿತ್ತು."

"ಯಾವ ಉದ್ಯೋಗ ತಮ್ಮದು?"

"ಮಲ್ಲಾಪುರದಲ್ಲಿ ಸ್ಕೂಲ್ ಮೇಸ್ಟ್ರಾಗಿದ್ದೇನೆ. ನೀವು?"

"ಓ! ನಮ್ಮ ಜನವೇ ಹಾಗಾದರೆ—ಒಂದೇ ಜಾತಿ?" ಎಂದು ರಾಜಣ್ಣ ಮುಗುಳ್ನಕ್ಕ.

"ಹಾಗಂದ್ರೆ ?" ಎಂದು ಅವರು ಅಚ್ಚರಿಯಿಂದ ಕೇಳಿದರು.

"ಏನಿಲ್ಲ—ನಾವಿಬ್ರೂನೂ ದುಡಿಯುವ ವರ್ಗಕ್ಕೇನೇ ಸೇರಿದೋರೂಂತ ಅನ್ನಿಸ್ತು. ಫ್ಯಾಕ್ಟರೀಲಿ ಕೆಲಸ ನನಗೆ !"

ಆತ ಎಲ್ಲಾ ಅರ್ಥವಾದವರ ಹಾಗೆ ತಲೆಯಾಡಿಸಿದರು.

ರಾಜಣ್ಣ, ಷರಾಯಿ ಜೇಬಿಗೆ ಕೈತುರುಕಿ ನೋಡಿದಾಗ ಸಿಗರೇಟು ಸಿಕ್ಕಿತು. ಇನ್ನೊಂದನ್ನು ಮಹಾ ಪ್ರಯಾಸದಿಂದ ಹುಡುಕಿ ತೆಗೆದು ಮೇಸ್ಟ್ರಿಗೆ ಕೊಡ ಹೋದ.

"ಕ್ಷಮಿಸಿ, ನನಗೆ ಅಭ್ಯಾಸವಿಲ್ಲ !" ಎಂದು ಅವರು ಹೇಳಿದರು.

ಅವರು ಕೇಳದಿದ್ದರೂ ರಾಜಣ್ಣನೇ ಸ್ವತಃ "ನೋಡಿ, ಕಷ್ಟ ಜೀವನ ನಡೆಸೋರಿಗೆ ಯಾವುದಾದ್ರೂ ಇಂಥ ಚಟ ಅಗತ್ಯ ಬೇಕಾಗುತ್ತೆ" ಎಂದು ಹೇಳಿದ.

ಅವರು ಮಾತಾಡಲಿಲ್ಲ. ಬಸ್ಸು ಬರಲಿಲ್ಲ ಎಂದು ಚಡಪಡಿಸತೊಡಗಿದರು, ಅಷ್ಟೆ.

"ಇನ್ನೂ ಎಂಟು ಘಂಟೇನೂ ಇಲ್ಲ. ಆಫೀಸು ಬಾಗಿಲು ಇಷ್ಟು ಬೇಗ ತೆಗೆಯುತ್ತೆ ?" ಎಂದ ರಾಜಣ್ಣ.

"ತೆಗೀದಿದ್ರೇ ? ಅಲ್ಲಿ ಹೋಗಿ ಕಾಯಬೇಕಪ್ಪ. ನನ್ನಂಥಾವ್ರು ಎಷ್ಟು ಜನಾನೊ ಅಲ್ಲಿ...! ಆಮೇಲೆ ಸಾಹೇಬ್ರಿಗೆ ತಲೆಬಾಗಿ ನಮಸ್ಕರಿಸಿ, ನಡುನಡುಗುತ್ತಾ ಅವರ ಕಾಲಿಗೆ ಬಿದ್ರೇನೇ, ಅವರಿಗೆ ತೃಪ್ತಿ. ವರ ದಯಪಾಲಿಸ್ತಾರೆ."

ಆ ಮಾತು ಕೇಳಿ ರಾಜಣ್ಣನಿಗೆ ತುಂಬಾ ಬೇಸರವಾಯಿತು.

"ನೀವ್ಯಾಕ್ರಿ ಅಷ್ಟು ಹೆದರ್ಬೇಕು, ಸಾಹೇಬ್ರು ಅಂದ್ರೆ? ಏನಿದೆ ಅಂಥಾದ್ದು ಅವರಲ್ಲಿ ?"

"ಏನಿದೆ ಅಂತೀರಾ ?—ಆ ಅಧಿಕಾರ ಅನ್ನೋದು ಇದೆಯಲ್ರಿ."

"ಅವರಿಗೆ ಅಧಿಕಾರ ಇದೇಂತಾ ನಾವು ಆತ್ಮಗೌರವವಿಲ್ಲದ ಪ್ರಾಣಿಗಳ ಹಾಗೆ ಅವರ ಕಾಲಿಗೆ ಬೀಳಬೇಕೇ ?"

"ಹೌದು. ಅದು ಬಿಟ್ಟು ಬೇರೆ ಮಾರ್ಗ ಎಲ್ಲಿದೆ ನಮಗೆ ?"

ತನ್ನ ಫ್ಯಾಕ್ಟರಿಯ ವಿಷಯವೆಲ್ಲಾ ರಾಜಣ್ಣನಿಗೆ ನೆನಪಿಗೆ ಬಂತು. ಶ್ರಮಜೀವಿಗಳು ಇಬ್ಬರೂ !

"ನಮ್ಮ ಕೂಲಿಗಾರರಲ್ಲೂ ಇದೇ ಅತೃಪ್ತಿ ನೋಡಿ ಸಾರ್. ಸುಖಭೋಗ ಎಲ್ಲಾ ಒಬ್ಬರಿಗೆ ಮೀಸಲು—ಮಿಕ್ಕವರ ಪಾಲಿಗೆ ದುಃಖದ ಕಣ್ಣೀರು. ಕಷ್ಟದ ಕೂಳು. ನಾವು ಮನುಷ್ಯರಲ್ವೇ? ನಮಗೂ ಇವರ ಹಾಗೆ ಸುಖವಾಗಿ ಬಾಳಿ ಬದುಕಬೇಕೆನ್ನೋ ಆಸೆಯಿಲ್ವೆ?"

ಅವರು ರಾಜಣ್ಣನನ್ನೇ ನೋಡುತ್ತಾ ನಿಂತುಬಿಟ್ಟಿದ್ದರು. ಬಸ್ಸು ಬಂತು. ಟಿಫಿನ್ ಕ್ಯಾರಿಯರನ್ನೆತ್ತಿಕೊಂಡು, "ಬನ್ನಿ ಸಾರ್, ಬಸ್ಸು ಬಂತು" ಎಂದು ರಾಜಣ್ಣ ಹೇಳಿದಾಗಲೇ ಅವರಿಗೆ ಎಚ್ಚರ.

ಬಹಳ ಹಾದಿ ಕ್ರಮಿಸುವವರೆಗೂ ಅವರು ಮಾತಾಡಲೇ ಇಲ್ಲ. ಬಸ್ಸು ಸೆಂಟ್ರಲ್ ಕಾಲೇಜು ದಾಟಿದಾಗ ಅವರು ಪಿಸುಮಾತಿನಲ್ಲಿ, "ನೋಡಿ, ನೀವೆಲ್ಲಾ ಏನೇನೋ ಹೇಳಿದ್ರಿ. ಆದ್ರೆ ನಮ್ಮ ಈ ಕಷ್ಟ ಕೊನೆಯಾಗೋಕೆ ಒಂದು ಮಾರ್ಗ ಹೇಳ್ಲಿಲ್ಲ!" ಎಂದರು.

"ಓ...ಅದೇ!...ಹೇಳ್ತೀನಿ ಅದನ್ನೇ. ಮುಖ್ಯ ನಮ್ಮನಮ್ಮೋರಲ್ಲಿ ಬಲವಾದ ಒಗ್ಗಟ್ಟು ಬೆಳೀಬೇಕು, ಆಗುತ್ತಿರೋ ಅನ್ಯಾಯಾನ ಧೈರ್ಯದಿಂದ ಎದುರಿಸ್ಬೇಕು ಸಾರ್!"

"ಒಗ್ಗಟ್ಟು, ಒಗ್ಗಟ್ಟು" ಎಂದು ಅವರು ಹೇಳಿಕೊಂಡರು.

ಬಸ್ಸು ಇಳಿಯುವ ಮುನ್ನ ಅಡ್ರೆಸ್ಸು ಬರೆದು ರಾಜಣ್ಣನಿಗೆ ಕೊಟ್ಟು, "ನನಗೆ ಕಾಗದ ಬರೀತೀರಾ ನೀವು?" ಎಂದು ಕೇಳಿದರು. ಅನಿರೀಕ್ಷಿತ ಪರಿಚಯ ಆ ರೀತಿ ಆದುದನ್ನು ಕಂಡು ರಾಜಣ್ಣ ವಿಸ್ಮಯಗೊಂಡ. ಮತ್ತೆ ಮತ್ತೆ ಆ ಚೀಟಿಯನ್ನೋದಿದ...."ಲಕ್ಷ್ಮೀಪತಯ್ಯ ಸ್ಕೂಲ್ ಮಾಸ್ಟರ್, ಮಲ್ಲಾಪುರ..."

ಒಂದು ವಾರದ ಬಳಿಕ ರಾಜಣ್ಣ ಅವರಿಗೆ ಪತ್ರ ಬರೆದ. ಉತ್ತರ ಬಂತು. ಹಾಗೆ ಪತ್ರವ್ಯವಹಾರ ನಡೆಯಿತು.

* * *

ಲಕ್ಷ್ಮೀಪತಯ್ಯ ಶಾಲೆಯ ಉಪಾಧ್ಯಾಯರ ಗೋಳಿನ ಕತೆ ಬರೆಯುತ್ತಿದ್ದರು. ಎಷ್ಟೋ ಶಂಕೆ ಸಂದೇಹಗಳನ್ನು ಮುಂದಿಟ್ಟು ರಾಜಣ್ಣನ ಅಭಿಪ್ರಾಯ ಕೇಳುತ್ತಿದ್ದರು. ನಗರದ ಕಾರ್ಮಿಕ ರಾಜಣ್ಣ—ಹಳ್ಳಿಯ ಆ ಬಡ ಉಪಾಧ್ಯಾಯರಲ್ಲಿ ಆಗುತ್ತಿದ್ದ ಸೂಕ್ಷ್ಮ ಬದಲಾವಣೆಗಳನ್ನು ಗಮನಿಸಿದ. ಅನುಕ್ರಮವಾಗಿ

ಅವರ ಬರೆವಣಿಗೆಯಲ್ಲಿ ಅಳುಕು-ಸಂಕೋಚ ಮಾಯವಾಗಿ, ವಿಚಾರಶೀಲತೆ-ನಿರ್ಭಯತೆ ಮೂಡಿ ಬರುತ್ತಿದ್ದವು.

ಒಮ್ಮೆ ಲಕ್ಷ್ಮೀಪತಯ್ಯ ಬರೆದಿದ್ದರು :

"ಆಕಸ್ಮಿಕ ಪರಿಚಯವಾದಮೇಲೆ ಈಗ ಆತ್ಮೀಯರಾಗಿರುವ ರಾಜಣ್ಣ, ಮನೆಯಾಕೆ ನಿಮ್ಮನ್ನು ನೋಡಬೇಕೂಂತ ಆಸೆಪಡ್ತಾಳೆ. ಬಿಡುವುಮಾಡಿ ಕೊಂಡು ಆದಷ್ಟು ಬೇಗನೆ ಒಮ್ಮೆ ಬನ್ನಿ..."

ಪ್ರತಿದಿನವೂ ಯಂತ್ರದಂತೆ ದುಡಿಯಬೇಕಾಗಿದ್ದ ರಾಜಣ್ಣನಿಗೆ ಬಹಳ ದಿನಗಳ ತನಕ ರಜಾ ಸಿಗಲಿಲ್ಲ. ಕಡೆಗೊಮ್ಮೆ, ಮಲ್ಲಾಪುರದ ಸಮೀಪದಲ್ಲೇ ಇದ್ದ ದೂರದ ಸಂಬಂಧಿಕರೊಬ್ಬರ ಮನೆಗೆ ರಾಜಣ್ಣ ಹೋಗುವ ಪ್ರಮೇಯ ಒದಗಿತು. ಹಾಗೆಯೇ ಮಲ್ಲಾಪುರಕ್ಕೂ ಹೋಗಿ ಲಕ್ಷ್ಮೀಪತಯ್ಯನನ್ನೂ ನೋಡಿಕೊಂಡು ಬರಬೇಕು ಎಂದು ತೀರ್ಮಾನಿಸಿದ.

ಆ ದಿನ ಅವರ ಮನೆ ಹುಡುಕಿಕೊಂಡು ಹೋದ ರಾಜಣ್ಣ,

"ಅದೇ ಮೇಷ್ಟ್ರ ಮನೆ" ಎಂದು ಗೋಲಿಯಾಟ ಆಡುತ್ತಿದ್ದ ಚಿಕ್ಕ ಪೋರ ಬೊಟ್ಟುಮಾಡಿದ.

ಅಂಗಳದಲ್ಲಿ ಒಬ್ಬಳು ಪುಟ್ಟ ಹುಡುಗಿ ಕಬ್ಬು ಜಗಿಯುತ್ತಾ ನಿಂತಿದ್ದಳು...

"ಯಾರು ?" ಎಂದು ಕಬ್ಬು ತೆಗೆದು ಕೈಲಿ ಹಿಡಿದುಕೊಂಡು ಆಕೆ ಕೇಳಿದಳು. ರಾಜಣ್ಣ ಅಂಗಳಕ್ಕಿಳಿದ...ಆ ಹುಡುಗಿ ಅವನನ್ನೇ ದಿಟ್ಟಿಸಿ ನೋಡುತ್ತ ನಿಂತಳು.

"ಮೇಷ್ಟ್ರು ಮನೆಯಲ್ಲಿದ್ದಾರೆಯೇ ?...ನಾನು ಬೆಂಗಳೂರಿನಿಂದ ಬಂದಿದ್ದೀನಿ" ಎಂದು ಹೇಳಿದ.

ಅವನು ಮಾತು ಮುಗಿಸುವ ಮುಂಚೆಯೇ ಆ ಹುಡುಗಿ ನೆಗೆದು "ನೀವು ಹಾಗಾದ್ರೆ ರಾಜಣ್ಣನೇ ?" ಎಂದು ನಗುತ್ತಾ ಒಳಗೋಡಿದಳು. ರಾಜಣ್ಣ ತನ್ನ ಹೆಸರು ಆ ಮಗುವಿಗೆ ಹೇಗೆ ಗೊತ್ತಾಯಿತೆಂದು ಆಶ್ಚರ್ಯಪಡುತ್ತಾ ನಿಂತ.

ಅಷ್ಟರಲ್ಲಿ ಲಕ್ಷ್ಮೀಪತಯ್ಯ ಹೊರಗೆ ಬಂದರು. ಮುಗುಳ್ನಗುತ್ತಾ ಸ್ವಾಗತಿಸಿದರು.

"ಬನ್ನಿ ಬನ್ನಿ, ನಮ್ಮ ನರ್ಮದಾ ನಿಮ್ಮನ್ನು ಗುರುತಿಸಿಬಿಟ್ಟಳಂತೆ!" ಎಂದರು.

ಪಡಸಾಲೆಯಲ್ಲಿ ಚಾಪೆ ಹಾಸಿದರು. ಹೊರಳಿ ಸುತ್ತಲೂ ನೋಡಿದ ರಾಜಣ್ಣ. ಗೋಡೆಯ ಮೇಲೆ ಒಂದು ಮೂಲೆಯಲ್ಲಿ ವೆಂಕಟರಮಣನ ವರ್ಣಚಿತ್ರ ತೂಗುಹಾಕಿತ್ತು. ಹೊರಗಿನಿಂದ ಬಂದವರಿಗೆ ಯಾಕೊ ಕತ್ತಲೆ ಕೋಣೆಯೊಳಗೆ ಬಂದಹಾಗಾಗಿತ್ತು.

"ಪಟ್ಟಣದಲ್ಲಿರೋರು ನೀವು, ಹಳ್ಳಿ ಸೇರೋದಿಲ್ಲ ನಿಮಗೆ—" ಎಂದು ಲಕ್ಷ್ಮೀಪತಯ್ಯನವರೇ ಮಾತಿಗೆ ಶುರು ಮಾಡಿದರು.

"ಏನಿಲ್ಲ—ಹಾಗೇನಿಲ್ಲ..." ಎಂದು ರಾಜಣ್ಣ ಹೇಳಿದ, ಔಪಚಾರಿಕವಾಗಿ.

ಹಾಗೆಯೇ ಮಾತು ಹೊರಟಿತು, ಹೊತ್ತು ಕಳೆದುದೇ ತಿಳಿಯದ ಹಾಗೆ. ರಾಜಣ್ಣ ತನ್ನ ಕಾರ್ಖಾನೆಯ ವಿಷಯ, ತಮ್ಮ ಸಂಘದ ವಿಷಯ ಹೇಳಿದ. ಲಕ್ಷ್ಮೀಪತಯ್ಯ ತಾವು ಉಪಾಧ್ಯಾಯರ ಸಂಘ ಕಟ್ಟಲು ಹೋಗಿ ಆದ ಆಶಾಭಂಗದ ಕಥೆ ಹೇಳಿದರು...

"ಬಂದೋರ್ನ ಹಾಗೇ ಕೂಡಿಸ್ಕೊಂಡು ಮಾತಾಡೋದೇಂದ್ರೆ? ಸ್ವಲ್ಪ ಕಾಫಿ ತಗೋಳಿಪ್ಪಾ!" ಎಂದು ಯಾರೋ ಹೇಳಿದ ಹಾಗಾಗಿ ರಾಜಣ್ಣ ಹೊರಳಿ ನೋಡಿದ. ಮನೆಯೊಡತಿ ನಿಂತಿದ್ದಳು. ತುಂಬಿದ ಮುಖಕ್ಕೆ ಚೆಂದೊಳ್ಳಿ ಕುಂಕುಮ, ಕೆನ್ನೆಯ ತುಂಬಾ ಅರಸಿನ, ತುರುಬು ಕಟ್ಟಿ ಹೂ ಮುಡಿದಿದ್ದಳು. ಸೀರೆ ಕಚ್ಚೆ ಹಾಕಿ ಉಟ್ಟಿದ್ದಳು. ಆ ನಗುಮುಖ ನೋಡಿ ರಾಜಣ್ಣನಿಗೆ ಕಂಡರಿಯದ ತನ್ನ ತಾಯಿಯ ನೆನಪಾಯಿತು. ಬಹುಶಃ ತನ್ನ ತಾಯಿಯೂ ಹಾಗೇ ಇದ್ದಿರಬಹುದಿತ್ತೇನೊ? ಎನ್ನಿಸಿತು.

"ನೀವು ಬಂದಿದ್ದು ತುಂಬಾ ಸಂತೋಷವಪ್ಪಾ!" ಎಂದಾಕೆ ಹೇಳಿದಳು.

ರಾಜಣ್ಣ ಮನಸ್ಸಿನ ಉದ್ವೇಗ ತಡೆಯಲಾರದೆ, "ನೀವು ನಮ್ಮಮ್ಮನ ಹಾಗೇ ಇದ್ದೀರಾ!" ಎಂದುಬಿಟ್ಟ. ಆಕೆ ಇನ್ನೇನೂ ಮಾತನಾಡಲಿಲ್ಲ. ತುಂಬ ಸಂತೋಷದಿಂದ ಒಂದು ಗಳಿಗೆ ನಿಂತಿದ್ದು ಒಳಗೆ ಹೊರಟುಹೋದರು.

ಹೊರಡುವ ಹೊತ್ತು ಬಂದಾಗ ಆ ಹುಡುಗಿ ನರ್ಮದೆ ರಾಜಣ್ಣನನ್ನು ಬಸ್ಸಿಗೆ ಬಿಡಲು, ತಂದೆಯ ಹಿಂದೆ ಬಂದಳು.

ಅಂಗಡಿಯ ಬಳಿ ಕರೆದುಕೊಂಡು ಹೋಗಿ "ನರ್ಮದ. ನಿನಗೇನು ಬೇಕಮ್ಮ? ಪುಸ್ತಕ ಬೇಕೋ? ಚಾಕಲೇಟು ಬೇಕೋ?" ಎಂದು ಕೇಳಿದ.

"ಪುಸ್ತಕ ಓದೋದು ಅಂದ್ರೆ ನನಗೆ ತುಂಬಾ ಇಷ್ಟ. ಅಪ್ಪ ಯಾವ

ಪುಸ್ತಕಾನೂ ಕೊಡಿಸೊಲ್ಲ!'' ಎಂದು ಹೇಳಿದಳು.

ಚಾಕಲೇಟು ಕೊಂಡು ಅವಳ ಉಡಿಯ ತುಂಬಾ ತುಂಬಿದ.

''ನೋಡಿದಿರಾ ನಿಮ್ಮ ಮೇಲೆ ಆರೋಪ'' ಎಂದ ರಾಜಣ್ಣ, ಲಕ್ಷ್ಮೀಪತಯ್ಯನವರನ್ನು ನೋಡುತ್ತಾ.

ಅವರೂ ನಕ್ಕರು.

''ಬೆಂಗಳೂರಿಗೆ ಬರ್ತೀಯಾ ನರ್ಮ...ಬೇಕಾದಷ್ಟು ಪುಸ್ತಕ ಕೊಡಿಸ್ತೀನಿ!''

''ಓ...'' ಎಂದಾಕೆ ಹೇಳಿದಳು.

''ತುಂಟಿ!'' ಎಂದು ಲಕ್ಷ್ಮೀಪತಯ್ಯ ಅವಳ ಕೆನ್ನೆ ಹಿಂಡಿದರು.

ರಾಜಣ್ಣ ಬಸ್ಸು ಹತ್ತಿದ ಮೇಲೂ ಅವರು ಅಲ್ಲೇ ನಿಂತು ಮಾತಾಡುತ್ತಾ ಇದ್ದರು.

''ನರ್ಮದಾನ್ನ ಚೆನ್ನಾಗಿ ಬೆಳಸ್ಬೇಕು ರಾಯ್ರೆ! ಈ ಕಾಲಕ್ಕಂತೂ ಸುಖ ಕಾಣಲಿಲ್ಲ. ಅವಳ ಕಾಲಕ್ಕಾದ್ರೂ ಹೀಗಿರಬಾರದು'' ಎಂದು ರಾಜಣ್ಣ ಹೇಳಿದ. ಅದೇ ಆಗಿನ ಕಡೆಯ ಮಾತು. ಬಸ್ಸು ಹೊರಟಿತು.

...ನರ್ಮದೆ ಮರೆಯಾದರೂ, ಅವಳ ತೀಕ್ಷ್ಣ ಕಣ್ಣುಗಳು ರಾಜಣ್ಣನಿಗೆ ಇದಿರಾಗಿ ಬಂದು ನಿಲ್ಲುತ್ತಿದ್ದುವು. ಒಬ್ಬ ಪುಟ್ಟ ತಂಗಿ ಸಿಕ್ಕಿದಳು ನನಗೆ!'' ಎಂದುಕೊಂಡು ರಾಜಣ್ಣ ತನ್ನಷ್ಟಕ್ಕೆ ತಾನೇ ನಕ್ಕ.

* * *

ಅದಾಗಿ ಆರು ತಿಂಗಳು ಉರುಳಿಹೋದುವು...ಲಕ್ಷ್ಮೀಪತಯ್ಯನವರಿಂದ ಕಾಗದ ಬರಲೇ ಇಲ್ಲ. ಕಾದು ಕಾದು ಬೇಸತ್ತಾಗ ಕೊನೆಗೊಮ್ಮೆ ಉಪಾಧ್ಯಾಯರ ಸಮ್ಮೇಳನದ ಆಹ್ವಾನ ಪತ್ರಿಕೆ ಬಂತು. ರಾಜಣ್ಣನಿಗೂ ಅದಕ್ಕೂ ಎಲ್ಲಿಯ ಸಂಬಂಧ? ರಾಜಣ್ಣನಂತೂ ಹೋಗಲಿಲ್ಲ.

ಕೆಲವು ವಾರಗಳ ಮೇಲೆ ಮಲ್ಲಾಪುರದಿಂದ ಬಂದಿದ್ದ ಇನ್ನೊಬ್ಬ ಶಾಲಾ ಉಪಾಧ್ಯಾಯರು ರಾಜಣ್ಣನನ್ನು ಕಾಣಲು ಬಂದರು. ಲಕ್ಷ್ಮೀಪತಯ್ಯ ಅವರಿಗೆ ರಾಜಣ್ಣನ ವಿಳಾಸ ಕೊಟ್ಟಿದ್ದರಂತೆ. ಸಮ್ಮೇಳನದಲ್ಲಿ ನಡೆದುದೆಲ್ಲವನ್ನೂ ಆತ ವಿವರಿಸಿ ಹೇಳಿದರು.

ಹೀಗಿತ್ತು ಆ ಸಮ್ಮೇಳನದ ಕತೆ:

ಸಮ್ಮೇಳನದಲ್ಲಿ ಒಂದೇ ಆವರಣದಲ್ಲಿ ಅವರೆಲ್ಲರೂ ಕುಳಿತುಕೊಳ್ಳಲು

ವಿಪರ್ಯಾಸವಾಗಿತ್ತು—ಆ ಪುಟ್ಟ ಆವರಣದಲ್ಲೇ ಎಂತಹ ಅಗಾಧ ಭಿನ್ನತೆ!

ಸಾಹೇಬರು ಧರಿಸಿದ್ದ ಉಲ್ಲನ್ ಸೂಟು, ಬೆಳ್ಳಿಯ ಬೆಳಕಿಗೆ ಪಳಪಳನೆ ಮಿರುಗುತ್ತಿತ್ತು. "ಬ್ರಿಲ್ಲಿಯನ್‌ಟೈನ್" ಬಳಿದು ಕ್ರಾಪನ್ನು ನಯವಾಗಿ ಬಾಚಿದರು. ಮುಖಕ್ಕೆ ಮೆತ್ತಿದ್ದ ಪರಿಮಳಯುಕ್ತವಾದ ಸ್ನೋ ವಾಸನೆ ಅವರ ಹತ್ತಿರಕ್ಕೆ ಬರುತ್ತಿರುವಾಗಲೇ 'ಗಮ್' ಎಂದು ಬಡಿಯುತ್ತಿತ್ತು. ಅವರ ಜೊತೆಗೆ ಇನ್ನೂ ಹಲವು ಜನ ಮಾತಾಡುತ್ತಿದ್ದರು. ಅಲ್ಲಿ ಮನುಷ್ಯನಿಗೆ ಬೆಲೆಯಿರಲಿಲ್ಲ. ಅವನ ವೇಷಭೂಷಣ, ಅಲಂಕಾರ, ಅಲ್ಲಿ ದೊಡ್ಡತನವನ್ನು ನಿರ್ಧರಿಸುತ್ತಿದ್ದುವು.

ಸಭೆಯ ಹೊತ್ತಿಗೆ ಒಬ್ಬೊಬ್ಬರಾಗಿ ಉಪಾಧ್ಯಾಯರೆಲ್ಲರೂ ಬಂದರು. ಮುಖದ ಮೇಲೆ ಬಲವಂತವಾಗಿ ನಗೆ ಬರಿಸಿಕೊಂಡು ಸಾಹೇಬರಿಗೆ ಬಗ್ಗಿ ನಮಸ್ಕಾರ ಮಾಡಿದರೂ, ಅವರು ಇವರ ಕಡೆ ನೋಡಿದ ಹಾಗೆ ಕಾಣಲಿಲ್ಲ... ಅರೆನಗೆಯಿಂದಲೇ ಮುಂದುವರಿದು ಅವರು ಹೋಗುತ್ತಿದ್ದರು. ಅಸಹಾಯತೆಯ, ನಿರಾಸೆಯ ನಗೆ ಅದು. ಅವರಷ್ಟು ಕಷ್ಟಪಟ್ಟು ದಿನವಿಡೀ ಹುಡುಗರಿಗೆ ಪಾಠ ಹೇಳುವುದಕ್ಕೆ ಅವರಿಗೆ ಸಿಕ್ಕುತ್ತಿದ್ದ ಪ್ರತಿಫಲ ಮೂವತ್ತಾರು ರೂಪಾಯಿ...ಅಷ್ಟರಲ್ಲಿ ಎಂಥ ಜೀವನ ನಡೆಸಬಹುದು?...

ಆದರೂ ಎಷ್ಟೋ ದೂರದಿಂದ ಅವರೆಲ್ಲಾ ಅಲ್ಲಿಗೆ ಬಂದು ನೆರೆದಿದ್ದರು. ತಮ್ಮ ಬಾಳು ಸುಧಾರಿಸುವುದೇ ಇಲ್ಲ ಎಂಬ ಬಲವಾದ ನಂಬುಗೆ ಇದ್ದರೂ, ಏನಾದರೂ ಒಳ್ಳೆಯದಾಗಬಹುದು, ಈ ಕಷ್ಟದ ದಿನಗಳು ಪರಿಹಾರವಾಗಬಹುದು—ಆಗಬಹುದು, ಎಂಬ ಆಸೆಯಿಂದ, ದುಡಿದು ಹಣ್ಣಾದ ಆ ದೇಹಗಳನ್ನು ಹೊತ್ತು ತಂದಿದ್ದರು ಅವರು.

ಎಂದಿನಂತೆ ಪ್ರಾರ್ಥನೆಯಿಂದ ಕಾರ್ಯಕಲಾಪಗಳು ಆರಂಭವಾದುವು. ಎಲ್ಲರೂ ಕೇಳುತ್ತಲೇ ಕುಳಿತಿದ್ದರು. ಆ ಹುಡುಗಿ "ದೀನ ರಕ್ಷಕಾ... ಕಾಯೋ..." ಎಂದು ಹಾಡುತ್ತಲೇ ಇದ್ದಳು. ಹಲವರ ಮನಸ್ಸಿನಲ್ಲಿ ಒಂದು ಯೋಚನೆ ಬಂತು. "ಯುಗಯುಗಾಂತರದಿಂದ ಈ ಗೀತೆಯನ್ನು ಹಾಡುತ್ತಿದ್ದೇವೆ. ಆದರೆ ಈ ದೀನ ರಕ್ಷಕ ಎಲ್ಲಿದ್ದಾನೆ?...ನಾವಿಷ್ಟು ಭವಣೆಯಲ್ಲಿದ್ದರೂ ಸಹ ಈತ ಬಂದು ಯಾಕೆ ಕಾಪಾಡುತ್ತಿಲ್ಲ? ಅದೆಲ್ಲ ಹುಸಿ ಅಲ್ಲವೆ?"

ನಿರ್ಣಯಗಳ ಚರ್ಚೆ ಆರಂಭವಾಯಿತು. ಸಾಹೇಬರು ತಮ್ಮ ಘನ,

ಗಾಂಭೀರ್ಯವನ್ನು ಬಿಡದೆ, ಸಿಗರೇಟು ಹಚ್ಚಿ, ಅನ್ಯಮನಸ್ಕರಾಗಿ ಸೇದುತ್ತಾ ಕುಳಿತರು...ಉಪಾಧ್ಯಾಯರು ಒಬ್ಬೊಬ್ಬರಾಗಿ ಬಂದು ತಮ್ಮ ನಿರ್ಣಯ ಸೂಚಿಸಿ, ಸಮರ್ಥಿಸಿ ಮಾತಾಡಿದರು. ಆದರೆ ಆ ಸಮರ್ಥನೆಯಲ್ಲೇನೂ ಹುರುಳಿದ್ದ ಹಾಗೆ ಕಾಣಲಿಲ್ಲ. ಹೆದ-ಹೆದರುತ್ತಾ, ಮಧ್ಯೆ ಮಧ್ಯೆ ಸಾಹೇಬರ ಕಡೆ ನೋಡುತ್ತಾ, ಅವರು ಅನುಮತಿಸಿದಂತೆ ವರ್ತಿಸುವ ಸ್ವಭಾವ ಎಂದಿನಿಂದಲೂ ನಡೆದು ಬಂದದ್ದು ; ಆ ದಿನಕ್ಕೆ ಏನೂ ಹೊಸದಲ್ಲ.

"ಸಂಬಳ ಜಾಸ್ತಿ ಮಾಡಬೇಕು ಮಹಾಸ್ವಾಮಿ !" ಎಂದು ಒಬ್ಬ ಉಪಾಧ್ಯಾಯ ಅತಿ ವಿನಯದಿಂದ ಪ್ರಾರ್ಥಿಸಿಕೊಂಡ. ಸಾಹೇಬರು ನಕ್ಕರು. ಅವರಿಗದು ತಮಾಷೆ. ಬಡ ಉಪಾಧ್ಯಾಯರ ಕಷ್ಟನಷ್ಟದ ಅರಿವು ಮಹಲಿನಲ್ಲಿ ವಿಹರಿಸುವ ಅವರಿಗೆ ಹೇಗೆ ಗೊತ್ತಾಗಬೇಕು ?

ಪಕ್ಕದಲ್ಲಿದ್ದ ಇನ್ಸ್‌ಪೆಕ್ಟರೊಂದಿಗೆ ಮಾತನಾಡಿ, "ಇದು ಹಿಂದಿನ ಸಮ್ಮೇಳನದಲ್ಲಿ ಅಂಗೀಕೃತವಾಗಿದೆ...ನಿರ್ಣಯ ವಾಪ್ಸ್ ತೆಗೆದುಕೊಳ್ಳಿ !" ಎಂದು ಹೇಳಿದರು. ಸೂಚಿಸಿದ ಉಪಾಧ್ಯಾಯರು ಇನ್ಸ್‌ಪೆಕ್ಟರ್ ಕಡೆ ನೋಡಿದರು. ಅವರ ಕಣ್ಣ ಸಂಜ್ಞೆ ನೋಡಿ ಮೆಲ್ಲನೆ ಇಳಿದು ಬಂದರು.

ಲಕ್ಷ್ಮೀಪತಯ್ಯ ಅದುವರೆಗೂ ಸುಮ್ಮನೆ ಕುಳಿತುಕೊಂಡಿದ್ದರು. ನಡೆದುದನ್ನು ಕಂಡು ತುಂಬಾ ಕೋಪ ಬಂತು. ಆ ಉಪಾಧ್ಯಾಯರು ಬಂದು ಕುಳಿತುಕೊಳ್ಳುತ್ತಲೇ, "ಯಾಕ್ರಿ, ನೀವು ಹಿಂದೆ ತೆಗೆದುಕೊಳ್ಳೋದಿಲ್ಲಾ ಅಂತ ಯಾಕೆ ಹೇಳಬಾರದಾಗಿತ್ತು ?" ಎಂದು ಕೇಳಿದರು...

"ಭಯವಾಯಿತು ಲಕ್ಷ್ಮೀಪತಯ್ಯ...ಆಮೇಲೆ ಇನ್ಸ್‌ಪೆಕ್ಟರು ಏನಾದ್ರೂ ಮಾಡಬಹುದು. ಬಡವ ನಾನು."

ಎಂತಹ ಅಸಹಾಯತೆ ಅದು ! ಭಯದ ಹೆಸರಲ್ಲೇ ತಲೆಬಾಗಿ ಕುಳಿತಿರಬೇಕೆ ಎಲ್ಲರೂ ?

ಎಲ್ಲರ ಮನಸ್ಸಿನಲ್ಲೂ ಅದೇ ಕೊರೆಯುತ್ತಿತ್ತು. ತಮಗೆ ಹಣ ಜಾಸ್ತಿ ಬೇಕೆಂದು ಕೇಳಿದರೆ ತಪ್ಪೇನು ? ಒಬ್ಬೊಬ್ಬರ ಮುಖವೂ ಸಿಡಿಯಲು ಸಿದ್ಧವಾಗಿ ನಿಂತಿದ್ದ ಜ್ವಾಲಾಮುಖಿಯಂತೆ ಕ್ರೋಧವನ್ನು ಹೊರ ಸೂಸುತ್ತಿತ್ತು.

ಮುಂದೆಯೂ ಹೀಗೆ ನಡೆಯಿತು. ಉಪಾಧ್ಯಾಯರು ಕೇಳಿದ ಪ್ರಶ್ನೆಗಳಿಗೆಲ್ಲ ಸಾಹೇಬರು "ಅದು ಅಲ್ಲಿ ಅಂಗೀಕೃತವಾಗಿದೆ, ಇಲ್ಲಿ ಸ್ವೀಕರಿಸಲ್ಪಟ್ಟಿದೆ,

ಹಿಂದಕ್ಕೆ ತೆಗೆದುಕೊಳ್ಳಿ" ಎಂದೊ, ಇಲ್ಲದಿದ್ದರೆ "ಅದು ಸಾಧ್ಯವಿಲ್ಲಾರಿ" ಎಂದೋ, ನಿರ್ದಾಕ್ಷಿಣ್ಯವಾಗಿ ಹೇಳುತ್ತಿದ್ದರು.

ಇಷ್ಟು ಮಾತ್ರಕ್ಕೆ ಅವರೆಲ್ಲಾ ಅಷ್ಟು ಶ್ರಮವಹಿಸಿ ಆ ಸಮ್ಮೇಳನ ಕೂಡಿಸಿದರೆ? ಅವರು ಊಹಿಸಿದ್ದೊಂದೂ ಈಡೇರಲಿಲ್ಲವಲ್ಲಾ...!

ಸಭೆ ಮುಗಿಯುವ ವೇಳೆಗೆ ಲಕ್ಷ್ಮೀಪತಯ್ಯ ಎದ್ದು ವೇದಿಕೆಯ ಮೇಲೆ ಬಂದರು. ಸುಮ್ಮನಿದ್ದವರೆಲ್ಲಾ ಏನೋ ಉತ್ಸಾಹದಿಂದ ಚಪ್ಪಾಳೆ ಬಡಿದರು. ಆತ ಮೇಜಿನ ಮೇಲೆ ಬಗ್ಗಿ "ಒಂದೆರಡು ಮಾತಾಡುವುದಿದೆ. ಐದು ನಿಮಿಷ ಟೈಮ್ ಕೊಡುತ್ತೀರಾ ಸಾರ್?" ಎಂದು ಕೇಳಿ, ಉತ್ತರಕ್ಕೆ ಕಾಯದೆಯೆ, ಮಾತಾಡಲು ಮೊದಲಿಟ್ಟರು.

ಎಲ್ಲರ ತಲೆ ತಿನ್ನುತ್ತಿದ್ದ ಸಂಬಳದ ಪ್ರಶ್ನೆಯೇ ಅದು...

ನಯವಾಗಿ ನಾಜೋಕಾಗಿ ಅದರ ಅವಶ್ಯಕತೆಯನ್ನು ವಿವರಿಸಿದರು. ಅವರು ಮಾತಾಡುತ್ತಿರುವಾಗಲೇ ಇನ್ಸ್‌ಪೆಕ್ಟರ್ ಕೆಂಗಣ್ಣು ಮಾಡಿ, "ಆ ವಿಷಯ ಆಗಲೇ ಚರ್ಚಿಸಿಯಾಗಿದೇರಿ!" ಎಂದು ಟೇಬಲನ್ನು ಗುದ್ದಿದರು. ಕುಳಿತಿದ್ದವರಲ್ಲಿ ಪ್ರತಿಯೊಬ್ಬನ ಎದೆಯೂ ದಡದಡನೆ ಹೊಡೆದುಕೊಳ್ಳಲಾರಂಭಿಸಿತು. ಲಕ್ಷ್ಮೀಪತಯ್ಯ ಹಿಂಜರಿಯಲಿಲ್ಲ.

"ಹೌದು ಸಾರ್ ಚರ್ಚೆ ಆಯಿತು. ನೀವು, ಅಂಗೀಕೃತವಾಗಿದೆ—ಎಂದೇ ಹೇಳಿ ಮುಗಿಸಿದಿರಿ. ಆದರೆ ನಿಮಗದು ಗೊತ್ತಿಲ್ಲ. ಅಂಗೀಕೃತವಾಗಿದೆ ಎಂದು ಹೇಳಿದ ಮೇಲೆ ಎಷ್ಟೋ ವರ್ಷಗಳಾದರೂ ಹಣ ನಮ್ಮ ಕೈಗೆ ಬರೋದಿಲ್ಲ... ನಾವೆಲ್ಲಾ ಬಡವ್ರು ಸಾರ್, ಒಂದೊಂದು ಕಾಸಿಗೂ ಎಷ್ಟೊಂದು ಬೆಲೆಯಿದೆ ಅನ್ನೋದು ನಮಗೆಲ್ಲ ಗೊತ್ತು. ನಿರ್ಣಯವನ್ನು ಹಿಂತಿರುಗಿಸಬೇಡಿ. ಅದನ್ನು ನಿಧಾನವಾಗಿ ಚರ್ಚಿಸಿ."

ಇಷ್ಟುಹೊತ್ತು ಆರಾಮವಾಗಿ ಕುಳಿತು ಸಿಗರೇಟು ಸೇದುತ್ತಿದ್ದ ಸಾಹೇಬರು ತಿರುಗಿನೋಡಿ, "ಇದು ಉದ್ಧಟತನ!" ಎಂದು ಇನ್ಸ್‌ಪೆಕ್ಟರಿಗೆ ಹೇಳಿದರು.

ಉಪಾಧ್ಯಾಯರೆಲ್ಲಾ ಹೃದಯ ಕಂಪಿಸುತ್ತಿದ್ದರೂ ಏನೋ ಜಯ ಸಂಪಾದಿಸಿದವರಂತೆ, ತಲೆಯೆತ್ತಿ ಕುಳಿತರು. ಲಕ್ಷ್ಮೀಪತಯ್ಯ ಮಾತು ಮುಗಿಸಿ, ವೇದಿಕೆಯಿಂದ ಇಳಿದು ಬರುತ್ತಿದ್ದಾಗ ಇನ್ಸ್‌ಪೆಕ್ಟರೂ ಸಾಹೇಬರೂ ಏನೋ ಗೂಢವಾಗಿ ಮಾತಾಡುತ್ತಿದ್ದುದು ಅವರಿಗೆ ತಿಳಿಯಿತು.

ಅದೇನೋ ಅವರೆಲ್ಲರಿಗೂ ಸರ್ವೋತ್ಸಾಹ ಬಂದಿತ್ತು. ಲಕ್ಷ್ಮೀಪತಯ್ಯನವರ ಗೆಳೆಯನೊಬ್ಬ ಮಾತ್ರ, "ನೀವು ಹಾಗೆ ಮಾತಾಡಬಾರದಿತ್ತರೀ" ಎಂದು ಹೇಳಿದ.

ಲಕ್ಷ್ಮೀಪತಯ್ಯನಿಗೆ ಚೇಳು ಕುಟುಕಿದ ಹಾಗಾಯಿತು. ಸ್ವರ ನಡುಗಿತು.

"ಯಾಕೆ ಮಾತಾಡಬಾರದು? ನಮ್ಮ ಕಷ್ಟ ಹೇಳೋದಕ್ಕೂ ನಮಗೆ ಅಧಿಕಾರ ಇಲ್ಲವೇನ್ರಿ?...ನಾವು ಮನುಷ್ಯರಲ್ಲವೇ...ತಲೇಲಿ ಬುದ್ಧೀ ಇಲ್ವೇ...?"

ಕೇಳುತ್ತಿದ್ದವರ ಮೈ ಮನಸ್ಸು ಒಂದಾಗಿ ಅದೇ ಮಾತು ಪ್ರತಿಧ್ವನಿಸಿತು.

"ನಮಗೆ ಅಧಿಕಾರ ಇಲ್ಲವೆ?—ನಾವು ಮನುಷ್ಯರಲ್ವೆ...?"

ಹಾಗೆ ವಿಚಾರಶಕ್ತಿ ಕೆರಳಿ ನಿಂತಿತು.

"ಎಷ್ಟು ದಿನಾನ್ರೀ ಈ ದಾಸ್ಯ? ನಾವು ಹೆದರ್ತಾ ಬೆದರ್ತಾ ಹೋದಷ್ಟೂ, ಇವ್ರು ನಮ್ಮ ಮೇಲೆ ಬೀಳ್ತಾರೆ!...ಯಾವತ್ತೂ ನಮಗೆ ಸುಖಾನೇ ಬೇಡವೆ? ಈ ಕಷ್ಟವೇ ಯಾವಾಗ್ಲೂ ಇರ್ಬೇಕೆ ಕೊನೆವರೆಗೂ?"

ತುಟಿಪಿಟಕ್ಕೆನ್ನದೆ ಎಲ್ಲರೂ ಆ ಮಾತು ಕೇಳುತ್ತಿದ್ದರು...

ಕೊನೆಗೂ ಅವರೆಲ್ಲಾ ಊಹಿಸಿದ್ದುದು ನಡೆದೇಹೋಯಿತು.

ಉದ್ಧಟತನದಿಂದ ವರ್ತಿಸಿದ್ದಕ್ಕಾಗಿ ಲಕ್ಷ್ಮೀಪತಯ್ಯನವರಿಗೆ ಸಸ್ಪೆಂಡ್ ಆರ್ಡರ್ ಬಂದಿತ್ತು. ಅವರು ಅದನ್ನು ಕೇಳಿ ಹೆದರಲಿಲ್ಲ. ಧೈರ್ಯಗೆಟ್ಟು ವರ್ತಿಸಲಿಲ್ಲ. ಎಂದಿನಂತೆ ಸ್ಥಿರಚಿತ್ತರಾಗಿ ಮನೆಗೆ ಹೋದರು. ಕಾವೇರಮ್ಮ ಪತಿಯ ಕೆಲಸಕ್ಕೆ ಮಣ್ಣು ಬಿದ್ದುದಕ್ಕಾಗಿ ಎದೆ ಬಡಿದುಕೊಂಡು ಅತ್ತರು. ಆದ ಅನ್ಯಾಯವನ್ನು ಕಂಡು ಆ ಬಡ ಉಪಾಧ್ಯಾಯರಲ್ಲೂ ಆತ್ಮಗೌರವ, ಪ್ರತಿಷ್ಠೆ, ಕೆದಕಿ ನಿಂತುವು...

...ಆ ಕತೆ ಕೇಳಿದ ರಾಜಣ್ಣನ ಹೃದಯ ತುಂಬಿ ಬಂತು. ಧೈರ್ಯಗುಂದ ಬಾರದೆಂದು ಆತ ಲಕ್ಷ್ಮೀಪತಯ್ಯನಿಗೆ ದೀರ್ಘ ಕಾಗದ ಬರೆದ.

* * *

ಆದೇತಾನೇ ಹನ್ನೆರಡು ಹೊಡೆದಿತ್ತು. ನಿದ್ದೆ ಮಾಡಬೇಕೆಂದರೂ ಬಾರದು ನಿದ್ದೆ. ಹಾಸಿಗೆಯ ಮೇಲುರುಳಿಕೊಂಡು, ಕಣ್ಣು ಮುಚ್ಚಿಕೊಂಡರೂ ಧಾರೆ ಧಾರೆಯಾಗಿ ಪ್ರವಹಿಸುವ ನೂರು ಯೋಚನೆಗಳು...

ಇಲ್ಲ. ಅದನ್ನೆಲ್ಲಾ ದೂರಮಾಡಿಬಿಡಬೇಕೆಂದುಕೊಂಡು ರಾಜಣ್ಣ ತಲೆ ಕೊಡಹಿದ. ಮೊದಲೇ ಎಣ್ಣೆಯಿಲ್ಲದೆ ಕೆದರಿದ್ದ ಕ್ರಾಪು ಮತ್ತೂ ಹರವಾಗಿ ಚೆಲ್ಲಾಪಿಲ್ಲಿಯಾಯಿತು. ಮುಖದ ಮೇಲೆ ಬಿದ್ದಿದ್ದ ಕ್ರಾಪನ್ನು ಹಿಂದಕ್ಕೆ ಸರಿಸುತ್ತಾ ತನ್ನಷ್ಟಕ್ಕೆ ತಾನೇ ಯೋಚಿಸಿಕೊಂಡ ರಾಜಣ್ಣ.

''ಇವತ್ತು ರಾತ್ರೆ ಡ್ಯೂಟಿ—ನಿದ್ದೆ ಮಾಡೋಣ ಇನ್ನು ! ನಿದ್ದೆ...''

ಅಷ್ಟರಲ್ಲಿ ಯಾರೋ ಬಾಗಿಲು ಬಡಿದರು. ಯಾವುದೋ ಎಳೆಯ ಹುಡುಗಿ ''ರಾಜಣ್ಣ...ಅಣ್ಣ...'' ಎಂದು ಕೂಗುತ್ತಿದ್ದುದು ಕೇಳಿಸಿತು. ಸ್ವರ ಯಾರದೆಂದು ನೆನಪಿಗೆ ಬರಲೊಲ್ಲದು...ಹಾಸಿಗೆಯಿಂದ ಜಗ್ಗನೆ ಎದ್ದು ರಾಜಣ್ಣ ಬಾಗಿಲು ತೆರೆದ. ನರ್ಮದ ಒಳಗೋಡಿ ಬಂದಳು. ಲಕ್ಷ್ಮೀಪತಯ್ಯ ಅಲ್ಲೆ ಮುಗುಳ್ನಗೆ ನಗುತ್ತಾ ನಿಂತಿದ್ದರು. ನರ್ಮದೆಯನ್ನೆತ್ತಿಕೊಂಡ ರಾಜಣ್ಣ.

ಲಕ್ಷ್ಮೀಪತಯ್ಯನೂ ಒಳಕ್ಕೆ ಬಂದು, ಹಾಸಿದ ಹಾಸಿಗೆ ನೋಡಿ, ''ನಿದ್ದೆ ಮಾಡ್ತಿದ್ದಿರಾ ?'' ಎಂದು ಕೇಳಿದರು.

''ಇಲ್ಲ. ಇನ್ನೂ ಇಲ್ಲ. ರಾತ್ರೆ ಡ್ಯೂಟಿ ಇವತ್ತಿನಿಂದ. ಹಾಗಾಗಿ ಹಗಲು ಹೊತ್ತು ನಿದ್ದೆ !'' ಎಂದು ರಾಜಣ್ಣ ನಗುತ್ತಾ ಹೇಳಿದ.

ಸಂಕೋಚವಿಲ್ಲದೆ ಅವರು ಹಾಸಿಗೆಯಲ್ಲಿ ಕುಳಿತರು. ಕೊಠಡಿಯ ಅಸ್ತವ್ಯಸ್ತತೆ ನೋಡಿ ಅವರು ನಕ್ಕರು. ''ನೋಡಿ, ಇದನ್ನೆಲ್ಲಾ, ನೀಟಾಗಿ ಇಡೋಣಾಂದ್ರೆ ಬಿಡುವೇ ಇರೊಲ್ಲ'' ಎಂದು ರಾಜಣ್ಣ ಅಪರಾಧಿಯ ಸ್ವರದಲ್ಲಿ ವಿವರಣೆ ಕೊಡಲು ಹೊರಟ. ನರ್ಮದಾ, ಮೂಲೆಯೊಂದರ ಕಪಾಟಿನಲ್ಲಿಟ್ಟಿದ್ದ ಯಾವುದೋ ಪುಸ್ತಕದ ಬಳಿಗೆ ಹೋದಳು.

''ಫಸ್ಟ್‌ರೌಂಡ್ ಆಯಿತು ರಾಜಣ್ಣ, ನನ್ನ ಕೆಲಸ ತಿರುಗಿ ಸಿಕ್ತು'' ಎಂದು ಲಕ್ಷ್ಮೀಪತಯ್ಯನವರು ತಮ್ಮ ಹೋರಾಟದ ಕತೆ ಹೇಳಿದರು.

''ಹೌದೆ ? ಹೌದೆ ?'' ಎಂದು ರಾಜಣ್ಣ ಅವರ ಕೈ ಅಮುಕಿದ.

ಮತ್ತೆ ಮುಂದೆ, ''ಆಗ್ಲಿ. ಇಲ್ಲಿಗೆ ಮುಗಿಯಲಿಲ್ಲ—ಇನ್ನೂ ಇದೆ. ನಾವು ಸುಧಾರಿಸಬೇಕಾದ್ದು ಇನ್ನೂ ತುಂಬಾ ಇದೆ'' ಎಂದ ಉತ್ಸಾಹದಿಂದ.

ಆ ಸಂತೋಷದಲ್ಲಿ ಅವರಿಗೇನಾದರೂ ಕೊಡಬೇಕೆನಿಸಿತು.

''ಇರಿ ; ಚಹಾ ಮಾಡ್ತೀನಿ'' ಎಂದ.

''ಸಾಮಾನು ಕೊಡೊ ಅಣ್ಣ, ನಾನು ಮಾಡ್ತೀನಿ'' ಎಂದು ಪುಟ್ಟ ಹುಡುಗಿ

ನರ್ಮದಾ ಹಟತೊಟ್ಟಳು. ಜೇಬಿಗೆ ಕೈಹಾಕಿ ನೋಡಿದ. ಹದಿನೈದಾಣೆ, ಆರು ಕಾಸಿತ್ತು. ಅಂಗಡಿಗೆ ಹೋಗಿ ನರ್ಮದೆಗೆ ಚಾಕೊಲೇಟು, ಬಿಸ್ಕತ್ತು, ಲಕ್ಷ್ಮೀಪತಯ್ಯನವರಿಗೆ ಬಾಳೆಹಣ್ಣು ಕೊಂಡು ತಂದ. ಅವರು ಅವನ ಆತಿಥ್ಯಕ್ಕೆ ಒಲ್ಲೆನೆನ್ನಲಿಲ್ಲ.

"ನೀವು ಈ ಜನರಲ್ಲೇ ದೊಡ್ಡ ಬಂಧುವಾಗಿದ್ದೀರಾ. ರಾಜಣ್ಣ!" ಎಂದು ಅವರು ಹೇಳಿದರು.

ನರ್ಮದಾಗೆ ಚಹಾ ಮಾಡಲು ಬರುತ್ತದೋ ಇಲ್ಲವೋ ಎಂದು ನೋಡು ತ್ತಿದ್ದಾಗ. "ಬಡವರ ಮನೆಯ ಹುಡುಗಿ ನಮ್ಮ ನರ್ಮದೆ. ಅವಳಿಗೆ ಗೊತ್ತಿ ಲ್ಲದ್ದೇ ಇಲ್ಲ!" ಎಂದು ಮಗಳನ್ನು ಹೊಗಳಿದರು. "ನೋಡಿ, ನಾನು ಎಷ್ಟು ಬೇಡಾಂದ್ರೂನೂ, ರಾಜಣ್ಣನ್ನ ನಾ ನೋಡಬೇಕೂಂತ ಓಡಿ ಬಂದಿದ್ದಾಳೆ. ಹುಚ್ಚು ಹುಡುಗಿ. ಬೆಂಗಳೂರಿಗೆ ಬಂದರೆ ಪುಸ್ತಕ ಕೊಡ್ತೀನಿ ಅಂತ ನೀವು ಹುಚ್ಚು ಹಿಡಿಸ್ಬಿಟ್ಟಿದ್ದೀರಾ" ಎಂದರು.

ನರ್ಮದೆ ಚಹಾ ತಂದಿಟ್ಟಾಗ, ತಂದಿದ್ದ ಚಾಕಲೇಟು ಅವಳ ಕೈಗೆ ತುರುಕಿ ಅವಳನ್ನು ಪಕ್ಕದಲ್ಲಿ ಕೂಡಿಸಿಕೊಂಡು, "ನಾನು ಬಂದಮೇಲೆ ಏನೇನಾಯ್ತು ನೀ ಹೇಳಲೇ ಇಲ್ಲವಮ್ಮ" ಎಂದ ರಾಜಣ್ಣ. ಅವಳು ಕಣ್ಣರಳಿಸಿಕೊಂಡು, "ಓ...ಅದೇ...ನಾನೇ ಹೇಳ್ಬೇಕೂಂತಿದ್ದೆ. ಅಪ್ಪನಿಗೆ ಕೆಲ್ಸ ಹೋಯ್ತು. ಆಗ ಬೇರೆಬೇರೆ ಮೇಷ್ಟ್ರುಗಳೆಲ್ಲಾ ಸೇರಿ ಒಂದ್ಸಾರಿ ಮೆರವಣಿಗೆ ಹೊರಟ್ರು...ನಾನು "ಜಿಂದಾಬಾದ್" ಹೇಳ್ತಾ ಹೋದೆ...ನೋಡಿ, ಒಂದ್ಸಾರಿಗೆ ಸಾಹೇಬ್ರು ಹೆದರಿಹೋದ್ರು. ಅಪ್ಪನಿಗೆ ಕೆಲ್ಸ ಕೊಟ್ರು...ನಮಗೇ ಜಯವಾಯಿತು. ಅಲ್ಲವೇ ಅಣ್ಣಯ್ಯ ? ಆಂ...?" ಎಂದಳು...ರಾಜಣ್ಣ ಲಕ್ಷ್ಮೀಪತಯ್ಯ ಇಬ್ಬರೂ ಮುಗುಳ್ನಕ್ಕರು. "ಹೇಗೆ ಜಿಂದಾಬಾದ್ ಹೇಳ್ದೆ ನೋಡೋಣ" ಎಂದ ರಾಜಣ್ಣ.

ಆ ದಿಟ್ಟ ಹುಡುಗಿ ಎದ್ದು ನಿಂತು, ಮೆರವಣಿಗೆಯ ದಿನ ತಾನು ಮಾಡಿ ದ್ದನ್ನು ಅನುಕರಿಸುತ್ತ, ಪುಟ್ಟ ಬಲಗೈ ಮೇಲೆತ್ತಿ, ಕಾಲ್ಬೆರಳ ಮೇಲೆ ಸೆಟೆದು ನಿಂತು ಉತ್ಸಾಹದಿಂದ "ಜಿಂದಾಬಾದ್!" ಎಂದಳು.

ಲಕ್ಷ್ಮೀಪತಯ್ಯನವರ ಕಣ್ಣುಗಳು ತೇವಗೊಂಡಿದ್ದವು. ರಾಜಣ್ಣ ಮುಖ ಅರಳಿಸಿ ನರ್ಮದೆಯನ್ನೇ ನೋಡಿದ.

ಡಿಸೆಂಬರ್, ೧೯೫೧

# ಪ್ರತಿಫಲ

ಬೆಳಗಿನ ಹೂಬಿಸಿಲು ಹಗುರವಾಗಿ ಹರಡಿತ್ತು. ಅರೆ ಉರುಳಿದ ಗೋಡೆಗೊರಗಿ ಕೊಂಡು ಎಂದಿನಂತೆ ಆ ಮುದುಕ ಕುಳಿತಿದ್ದ. ಆ ಸುಕ್ಕಿನ ಮೈ, ಗುಳಿ ಬಿದ್ದ ಕಣ್ಣು, ಬಾಡಿ ಬತ್ತಿದ ಕಪೋಲ, ಮುಖದ ತುಂಬೆಲ್ಲಾ ಹುಲುಸಾಗಿ ಬೆಳೆದಿದ್ದ ಆ ಬಿಳಿ ಕೂದಲು, ಇವೆಲ್ಲಾ ಏನನ್ನೋ ಗೂಢವಾಗಿ ಗುರಿಯಿಟ್ಟು ತೋರಿಸು ತ್ತಿದ್ದುವು.

ಅವನ ಬಾಳು...ಅದೊಂದು ದುರಂತ ಕತೆ. ಬವಣೆಗೆ ಸಿಕ್ಕಿ ಅವನ ಜೀವ ತತ್ತರಿಸಿಹೋಗಿತ್ತು. ಒಂದಾದಮೇಲೊಂದು ಕಷ್ಟ, ಅವನ ಮುದ್ದು ಮಗ ಚಂದ್ರುನ ಮರಣದಿಂದ ಮೊದಲುಗೊಂಡು ಅಂದಿನವರೆಗೆ ಅವನ ನೆರಳಿನಂತೆ ಹಿಂಬಾಲಿಸಿ ಬಂದಿದ್ದುವು. ಆ ಎಲ್ಲ ಕಷ್ಟಕಾರ್ಪಣ್ಯದ ಫಲ, ಅರವತ್ತು ವರ್ಷ ಕ್ಕೇನೇ ನೂರರ ಮುಪ್ಪು...ನಿರ್ಬಲತೆ, ನಿಸ್ಸಹಾಯತೆ, ನೀರಸ ಜೀವನ.

ಇವೆಲ್ಲದರ ಮಧ್ಯೆ ಅವನಿಗಿದ್ದ ಒಂದೇ ಒಂದು ಬೇಸರ ನೀಗುವ ಸಾಧನ ವೆಂದರೆ ಬೆಚ್ಚನೆಯ ಎಳೆ ಬಿಸಿಲು ಕಾಸುತ್ತಾ, ಅತ್ತಿತ್ತ ಹೋಗಿಬರುವವರನ್ನು ದಿಟ್ಟಿಸುತ್ತಾ, ಕೂಡುವುದು. ಅದು ಬಿಟ್ಟು ಬೇರೆ ಕೆಲಸವಿಲ್ಲ. ತನ್ನವರೆನ್ನುವ ಗೆಳೆಯರು ಮೊದಲೇ ಇಲ್ಲ ಅವನಿಗೆ.

ಎಳೆಯ ಹೂ ಬಿಸಿಲಿಗೆ ಮೈಯೊಡ್ಡಿ ಕುಳಿತಾಗ, ಏನೇನೋ ಹಿಂದಿನ ನೆನಪು ಬಾಧಿಸುತ್ತಿತ್ತು. ತನ್ನ ಗೆಳೆಯನ ಬಗ್ಗೆ ಜ್ಞಾಪಕವಾಗುತ್ತಿತ್ತು.

ಪಕ್ಕದ ಮನೆಯ ಮುದುಕ ಇವನಿಗಿಂತ ಚಿಕ್ಕವನು. ಅವನೊಡನೆ ಮಾತ ನಾಡುತ್ತಾ ಕುಳಿತರೆ ತನ್ನ ಬೇಸರಿಕೆ ಕಳೆಯುವುದೆಂದು ಮುದುಕನ ಆಶಯ. ಆದರೆ ಆತ ಎಲ್ಲಿ ಬರುತ್ತಾನೆ ? ಕೂಗಲೆಂದರೂ ಆ ಕೂಗಿದ ಶಬ್ದ ಒಂದು ಮೊಳದಾಚೆಯೂ ಕೇಳಿಸದು ಎಂದವನಿಗೆ ಗೊತ್ತು.

ಶಕ್ತಿ ಮೀರಿ ಕರೆದಾಗ ಸ್ವಲ್ಪ ಹೊತ್ತಿನ ಬಳಿಕ ಯಾರೋ ಬಂದಂತೆ ಭಾಸ ವಾಯಿತು. ಸುಯ್ಯೆಂದು ಗಾಳಿ ಬೀಸಿ, ವ್ಯಕ್ತಿಯೊಬ್ಬನ ಬರುವಿಕೆಯನ್ನು ಸೂಚಿಸಿತು. ಮೆಟ್ಟಿನ ಸಪ್ಪುಳ ಅಲೆಅಲೆಯಾಗಿ ಬಂದು ಅವನ ಕಿವಿಗೊರೆ ದಾಗ ಮುದುಕ ಓಗ್ಗಿನಿಂದ ತಲೆಯೆತ್ತಿದನು. ಬಂದವನು ಅವನೇ! ಅವನ ಗೆಳೆಯ...ಮಾತನಾಡಿಸಬೇಕೆನ್ನುವಷ್ಟರಲ್ಲಿ ಆತ ಮುಂದೆ ಸರಿದು ಹೋದ.

ಇದನ್ನು ಕಂಡು ಮುದುಕನಿಗೆ ಅಪಾರ ವೇದನೆ. ಗೆಳೆಯನಿಗೂ ತಾನು ಬೇಡ ವಾದೆನೆ? ತನ್ನನ್ನು ಕಂಡರೆ ಅವನಿಗೆಷ್ಟು ತಾತ್ಸಾರ? ಏಕೋ?—ತನ್ನ ತಾರುಣ್ಯದಲ್ಲಿ ಅವನಿಗೆ ಎಷ್ಟು ಕೆಲಸ ಮಾಡಿಕೊಟ್ಟಿರಲಿಲ್ಲ. ಅವನ ಸುಖ ಕ್ಕಾಗಿ ಎಷ್ಟು ಹಣ ಸುರಿದಿರಲಿಲ್ಲ? ಈಗ ತನ್ನ ಬಡತನದಲ್ಲಿ, ಮುಪ್ಪು ಜೊತೆ ಗೂಡಿ ಬಂದಾಗ, ಆತ ಒಂದು ಮಮತೆಯ ಮಾತನ್ನಾದರೂ ಆಡಬಾರದೆ? ಇಷ್ಟೆಯೇ ಅವನ ಕೃತಜ್ಞತೆ? ಇಷ್ಟೆಯೇ?...ಅಯ್ಯೋ, ಎಷ್ಟಾದರೂ ಮನು ಷ್ಯರ ಸ್ವಭಾವವೇ ಅಷ್ಟು, ಎಂದು ಮುದುಕ ಮುಖ ಕೆಳಗೆಮಾಡಿ ಕುಳಿತನು.

ಆದರೆ...ಆದರೆ...! ಗೆಳೆಯನ ಮೇಲಣ ಅಭಿಮಾನ ಮನದಿಂದ ಮರೆ ಯಾಗದು. ಛೆ, ತಾನು ಹಾಗೇಕೆ ಯೋಚಿಸಬಹುದೆ? ಪಾಪ! ಅವನಿಗೆಷ್ಟು ಕೆಲಸವೋ ಏನೋ! ಅವನಿಗೂ ಮನೆಯಿಲ್ಲವೆ? ದುಡಿಯಬೇಡವೆ? ಅವನ ಎದೆಯುದ್ದಕ್ಕೂ ಬೆಳೆದು ನಿಂತ ಮಗ ತಾರುಣ್ಯದ ಮೋಹದಲ್ಲಿ, ತಂದೆಯನ್ನು ದೂರಮಾಡಿ, ಯಾವಳನ್ನೋ ಕಟ್ಟಿಕೊಂಡು ಓಡಿಹೋಗಲಿಲ್ಲವೆ? ಎಂಥಾ ಪಾಪಿ ಆ ಮಗ!...ಮುಪ್ಪಿನ ತಂದೆಯನ್ನಗಲಿ ಹೋದವನು ಎಂತಹ ನೀಚ! ಎಂತಹ ಪಾಷಾಣ ಹೃದಯಿ!

ಗೆಳೆಯನ ಪಾಡು ಯೋಚಿಸುತ್ತಾ ಹೋಗುತ್ತಿದ್ದಾಗ, ಮುದುಕನಿಗೆ ಇದ್ದ ಕ್ಕಿದ್ದಂತೆ ತನ್ನ ಮಗನ ನೆನಪು ಬಂತು. ಕಡುಗಲಿ ಚಂದ್ರನ ನೆನಪಾದೊಡನೆ ಅವನ ಹೃದಯ ಹೆಮ್ಮೆಯಿಂದ ಹಿಗ್ಗಿತು. ಹಿಗ್ಗಿನ ಹಿಂದೆ ಮಗನನ್ನು ಕಳೆದು ಕೊಂಡ ದುಃಖ ಒತ್ತಿ ಬಂದು, ಆ ಮಗನ ನೆನಪಿಗಾಗಿ ಅವನ ಗುಳಿ ಬಿದ್ದ ಕಣ್ಣುಗಳಿಂದ ಆ ಒಣ ಕಪೋಲಗಳ ಮೇಲೆ ಎರಡು ಹನಿ ನೀರುರುಳಿತು.

—ತನ್ನ ಹರಕು ಧೋತ್ರದಂಚಿನಿಂದ ಮೆಲ್ಲನೆ ಅದನ್ನೊರೆಸಿಕೊಂಡನು.

ಆ ಮಗನ ಬಗ್ಗೆ ಯೋಚಿಸಿದ್ದಷ್ಟೂ ಹೆಮ್ಮೆ ಆತನಿಗೆ. ಅಂತಹ ಶೂರನ ತಂದೆ ತಾನು ಎಂಬ ಯೋಚನೆ ಬಂದೊಡನೆ ಹಿಗ್ಗಿನಿಂದ ಅವನ ಎದೆಯುಬ್ಬಿತು. ಎಂತಹ ಗುಣಾಢ್ಯ! ಎಂತಹ ದೇಶಪ್ರೇಮ!...ಓ! ಎಂತಹ ತ್ಯಾಗವೀರ ತನ್ನ ಚಂದ್ರ?...ಚಳವಳಿ ಸುರುವಾದಾಗ ಅವನು ಹಗಲಿರುಳು ಅದನ್ನು ಹರಡ ಲೆಂದು ಶ್ರಮಿಸಿದುದು ಸುಳ್ಳೆ? ಇರುಳೆಲ್ಲಾ ಚಳವಳಿ ಪತ್ರಿಕೆ ತಯಾರಿಸಿ. ಹಗಲೆಲ್ಲಾ ಸಂಘಟನೆ—ಮುಷ್ಕರದ ಕಾರ್ಯಗಳಿಗಾಗಿ ಆತ ಜೀವ ಸವೆಸಿದ್ದು ನಿಜವಲ್ಲವೇ?.. ಏನು ಇದೆಲ್ಲಾ ಕನಸೆ?...ತನ್ನ ಚಂದ್ರು ನಾಡಜನತೆಯ

ಬಿಡುಗಡೆಗಾಗಿಯಲ್ಲವೆ ಜೀವ ತೆತ್ತದ್ದು ?...ಅದು ಸುಳ್ಳೆ? ಅದೆಂದಿಗಾದರೂ ಸುಳ್ಳಾಗುತ್ತದೆಯೆ ?

ಸರಸರನೆ ಹಲವಾರು ವರುಷಗಳ ಹಿಂದಕ್ಕೆ ಮನ ಓಡಿತು...ಹೌದು : ಆ ಸ್ವಾತಂತ್ರ್ಯಘೋಷಣೆಯ ದಿನ...

* * *

ದೊಡ್ಡ ಸಭೆ ನಡೆಯುತ್ತಿತ್ತು. ಸಾವಿರಾರು ಜನರ ಭಾರಿ ಸಭೆ. ಅವರೆಲ್ಲರ ಬೆಂಗಾವಲಿಗಾಗಿ ನಿಂತ ಪೋಲೀಸರು ಕೆಂಗಣ್ಣು ಮಾಡಿ, ಎಲ್ಲರನ್ನೂ ನುಂಗುವಂತೆ ನೋಡುತ್ತಿದ್ದರು. ಅವರ ಕಿಡಿನೋಟಕ್ಕೆ ಚಂದ್ರು ಹೆದರಲಿಲ್ಲ; ಹಿಮ್ಮೆಟ್ಟಲಿಲ್ಲ; ಹೇಡಿಯಂತೋಡಲಿಲ್ಲ—ಆಜ್ಞೆ ಮುರಿದು ಭಾಷಣ ಮಾಡಿಯೇ ಮಾಡಿದ. ಆ ಆವೇಶಪೂರಿತ ಭಾಷಣ ಕೇಳಿ, ತಾನು ಮೊದಲುಗೊಂಡು ಎಷ್ಟು ಜನ ರೋಷದಿಂದ ಕುದಿದೇಳಲಿಲ್ಲ ?

ಅಷ್ಟರಲ್ಲಿ ವ್ಯಾನ್ ಬಂದಿತು. ಲಾಠಿಪ್ರಹಾರ ಮೊದಲಾಯಿತು. ಧ್ವನಿವಾಹಕದೆದುರು ನಿಂತು ಕಿರುಚುತ್ತಿದ್ದ ಚಂದ್ರುವಿನ ತಲೆಯ ಮೇಲೆ ಬಲವಾದ ಪೆಟ್ಟು ಬಿತ್ತು. ನೆತ್ತರು ಚಿಮ್ಮಿ ಬಂತು. ಚಂದ್ರು ಚಲಿಸದೆ ತಲೆಯನ್ನು ಒತ್ತಿ ಹಿಡಿದು, 'ಬಂಧುಗಳೇ ಇದು ಸ್ವಾತಂತ್ರ್ಯ ಸಮರ! ಹೇಡಿಗಳಂತೆ ಓಡಬೇಡಿ!' ಎಂದು ಗಂಟಲು ಬಿರಿಯುವ ಹಾಗೆ ಕಿರುಚುತ್ತಲೇ ಇದ್ದ. ನೆತ್ತರು ಸುರಿಯುತ್ತಿದ್ದುದನ್ನು ನೋಡಿ, ತಾನು ಗಾಬರಿಯಿಂದ ಮುಂದೆ ನುಗ್ಗಿ ಬಂದಾಗ—ಇನ್ನೇನು ಎರಡು ಮಾರು...ಎರಡೇ ಎರಡು ಮಾರು ಉಳಿದಿತ್ತು, ತನಗೂ ಚಂದ್ರುವಿಗೂ ನಡುವೆ, ಅಷ್ಟರಲ್ಲಿ ಹಾಯ್...ಆ ಪಾಪಿ, ಪೋಲೀಸ್ ಇನ್ಸ್ಪೆಕ್ಟರ್ ಹೊಡೆದ ಗುಂಡು ! ಆ ಗುಂಡು ಅವನೆದೆಯನ್ನು ಭೇದಿಸಿಕೊಂಡು ರೊಯ್ಯನೆ ಹೊರಟು ಹೋಯಿತು. ಚಂದ್ರು ಪ್ರಶಾಂತನಾಗಿ ಕೆಳಗುರುಳಿದ. ಸ್ವಾತಂತ್ರ್ಯವೇದಿಕೆಗೆ ಬಲಿಯಾದ. ಮುದುಕ ಚೀರಿ ಶವದ ಮೇಲೆ ಬಿದ್ದ.

* * *

ಹುಂ. ಪಾರ್ವತಿ ! ಅವಳೊಬ್ಬ ಮುಗ್ಧ ಬಾಲೆ. ತಬ್ಬಲಿ ಹುಡುಗಿ. ಮುದುಕ, ತಾನೇ ಆರಿಸಿ ತಂದು ಅವಳನ್ನು ಚಂದ್ರೂನ ಬಾಳ ಗೆಳತಿಯನ್ನಾಗಿ ಮಾಡಿದ್ದ. ಚಂದ್ರು ಸಹ ಪಾರ್ವತಿಯನ್ನು ಅತಿಯಾಗಿ ಪ್ರೀತಿಸುತ್ತಿದ್ದ. ಆದರೆ ಚಳವಳಿ ಪ್ರಾರಂಭವಾದಾಗ ಪಾರ್ವತಿ ಎಷ್ಟು ಬೇಡವೆಂದರೂ ಕೇಳದೆ, ಚಂದ್ರು

ರಣರಂಗಕ್ಕೆ ಧುಮುಕಿದ. ಅವಳ ಮೇಲಿನ ಮೋಹ ಅವನ ಕರ್ತವ್ಯಕ್ಕೆ ಅಡ್ಡಿ ಬರಲಿಲ್ಲ. "ಮೊದಲು ನಾಡ ತಾಯಿಯ ಬಿಡುಗಡೆ. ಅನಂತರ ಇನ್ನೆಲ್ಲಾ!" ಎಂದುಬಿಟ್ಟ. ಮದುವೆಯಾದವಳು ಸುಖ ಕೇಳಿಕೊಂಡು ಬಂದಿರಲಿಲ್ಲ. ಅಷ್ಟು ಚಿಕ್ಕಂದಿನಲ್ಲೇ ಅಷ್ಟು ಕಷ್ಟ ಅನುಭವಿಸಬೇಕಾಗಿತ್ತು. ಚಂದ್ರುವಿಲ್ಲದೆ ತನ್ನ ಜೀವವೇ ಇಷ್ಟುರೋಸಿಹೋಗಿರುವಾಗ ಪಾರ್ವತಿಗಿನ್ನೆಷ್ಟಾಗಿರಬೇಡ? ಚಂದ್ರು ವಿಲ್ಲದ ಅವಳ ಬಾಳು ಬಾಳೆ? ಆದರೂ ಬಂದ ಕಷ್ಟಕ್ಕೆಲ್ಲ ತಲೆಯೊಡ್ಡಿ ನಿಂತಿದ್ದಾಳೆ. ಒಮ್ಮೆಯಾದರೂ ಹಿಂದೆಗೆಯಲಿಲ್ಲ. ಅಳುಕಲಿಲ್ಲ. ನಮ್ಮ ನಾಡಿನ ಹೆಣ್ಣುಮಕ್ಕಳು ಎಷ್ಟು ವೀರರು! ಚಂದ್ರುವಿನ ತ್ಯಾಗಕ್ಕೆ ಇವಳ ತ್ಯಾಗವೂ ಸಮಾನವಲ್ಲವೆ?

* * *

ಮಗ ಮಡಿದಮೇಲೆ ಮುದುಕನಿಗೆ ಬಾಳಬೇಕೆನ್ನುವ ಆಸೆಯೇ ಹೊರಟು ಹೋಯಿತು. ಎರಡು ಮೂರು ವರುಷಗಳಲ್ಲಿಯೇ ಇಪ್ಪತ್ತು ವರುಷ ಕಳೆದಷ್ಟರ ಮುಪ್ಪು ಬಂತು. ದುಡಿಯಲು ಶಕ್ತಿ ಸಾಲದೆ ಮನೆಯಲ್ಲೇ ಕುಳಿತಿದ್ದಾಯಿತು. ಚಳವಳಿಗೆ ನಾಯಕನಾಗಿದ್ದವನ ಮನೆಯೆಂದು ಪೋಲೀಸಿನವರು ಜಫ್ತು ಮಾಡಿದಮೇಲೆ ಅವನ ಮನೆಗೆ ಬರಲು ಜನ ಹೆದರಿದರು. ಅಂತೂ ಒಂಟಿಯಾಗಿ ದಿನ ದೂಡಬೇಕಾಯಿತು. ಗದ್ದೆಯಿಂದ ಬಂದ ಬತ್ತದ ಅರ್ಧದಷ್ಟನ್ನು ಸರಕಾರಕ್ಕೆ ಕೊಟ್ಟು ಉಳಿದುದರಲ್ಲಿ ಒಪ್ಪತ್ತುಂಡು ಬಾಳುವಂತಾಯಿತು. ಅಂತೂ ಅಲ್ಲಿಗೆ ಬಂತು ಅವನ ಸ್ಥಿತಿ.

ಇದನ್ನೆಲ್ಲಾ ಯೋಚಿಸುತ್ತಾ ಮುದುಕನ ಕಣ್ಣು ಹನಿಗೂಡಿತು. ಜೊತೆಗೆ ಎಳೆಬಿಸಿಲು ಮಾಯವಾಗಿ ತೀಕ್ಷ್ಣವಾದ ಬಿಸಿಲು ಅವನ ಮೈಯನ್ನು ಚುಚ್ಚ ಹತ್ತಿತು. ಅದರ ಬೇಗೆ ತಾಳಲಾರದೆ ಮುದುಕ ಮೆಲ್ಲನೆ ಸಾವರಿಸಿಕೊಂಡೆದ್ದು, ಕೋಲೂರುತ್ತಾ ಒಳಗೆ ಹೋದನು. ಮೆಲ್ಲನೆ ಅಡಿಯಿಡುತ್ತಾ ಕೋಣೆಗೆ ಹೋಗಿ, ಸುತ್ತಿಟ್ಟ ಹಾಸಿಗೆಗೊರಗಿ ಕುಳಿತಾಗ ಅಬ್ಬಾ! ಎಂತಾ ಹಸಿವು! ಅವನ ದೃಢತೆಯನ್ನೆಲ್ಲಾ ಹಿಡಿದಲುಗಿಸಿದಂತಾಯಿತು...ಆ ಹಸಿವಿನ ಬೇಗೆಯಲ್ಲೇ ಸಿಡಿದು ಬಂದಂತೆ ಮತ್ತೆ ಈ ಯೋಚನಾಸರಣಿ, ಕೊನೆ ಮೊದಲಿಲ್ಲದ ವಿಚಾರ ಧಾರೆ.

* * *

ಅಂದು ಮಧ್ಯಾಹ್ನದ ಊಟವಾದಮೇಲೆ, ಕೊರಗಿ ಸೊರಗಿದ್ದ ದೇಹಕ್ಕೆ ಆನೆಯ ಬಲ ಬಂದಂತಾಯಿತು. ತಾನೆದ್ದು ಸ್ವಲ್ಪ ದೂರ ಅಡ್ಡಾಡಿ ಬರ ಬೇಕೆಂದು ಯೋಚಿಸಿಕೊಂಡನು. ದಿನವೂ ಮನೆಯಲ್ಲಿ ಕುಳಿತು ಕುಳಿತು ಬೇಸರವಾಗಿಹೋಗಿತ್ತು.

ಬಿಸಿಲು ಇಳಿಮುಖವಾದಾಗ, ಹೊರಗೆ ಹೊರಡುವ ಸಿದ್ಧತೆಯಾಯಿತು. ಎಂದಿನಂತೆ ಎತ್ತಿರಿಸಿದ ಆ ಹರಕು ಪೇಟ ತಲೆಯ ಮೇಲಿರಿಸಿಕೊಂಡು ದಾಯಿತು. ಮಾಸಿ ಮಲಿನವಾಗಿ ಚಿಂದಿಚಿಂದಿಯಾದರೂ ತನ್ನ ಪ್ರತಿಷ್ಠೆ ಹೊಗಳಿಕೊಳ್ಳುವಂತೆ ತೋರುತ್ತಿದ್ದ ಹಳೆಯ ದಿನಗಳ ಆ ಕೋಟು, ಅವನ ಮೈಮೇಲೆ ಬಂತು...ಹುಂ, ಅವನ ಪಾಲಿಗೆ ಅದೇ ದೊಡ್ಡ ಸಿದ್ಧತೆ. ಸೊಸೆಯನ್ನು ಕೂಗಿ ಅವಳಿಗೆ ಹೇಳಿ ಹೊರಟು ನಿಂತಾಗ ಏನೋ ಅವ್ಯಕ್ತ ಸಂತೋಷ ಅವನ ಮೇಲೆ ಮಿನುಗುತ್ತಿತ್ತು.

ಪೇಟೆಯ ಹತ್ತಿರ ಬರುತ್ತಾ ಜನಜಂಗುಳಿ ಜಾಸ್ತಿಯಾಯಿತು. ಅದೇಕೋ ಏನೋ ಮಂಕು ಬಡಿದವರಂತೆ ಜನ ಗುಂಪುಗುಂಪಾಗಿ ನಿಂತಿದ್ದರು. ಒಬ್ಬಿಬ್ಬರು ಏನೋ ಉತ್ಸಾಹದಿಂದ, ಶಕ್ತಿಮೀರಿ ಕಿರಿಚುತ್ತಿದ್ದರು. ಮುದುಕ ಕುತೂಹಲ ಪ್ರೇರಿತನಾಗಿ ಇದ್ದಷ್ಟು ಬಲದಲ್ಲೇ ಒಬ್ಬಿಬ್ಬರು ಹುಡುಗರನ್ನು ತಳ್ಳಿ, ಜಾಗ ಮಾಡಿಕೊಂಡು ಆ ಉತ್ಸಾಹೀ ತರುಣನ ಮಾತು ಕೇಳಿದನು. ತುಂಡು ತುಂಡು ಭಾಷೆ—ಅಲ್ಲೊಂದು ಇಲ್ಲೊಂದು ಪದ. ತರುಣ ಜೋರಾಗಿ ಹೇಳಿದ್ದು ಮಾತ್ರ ಕೇಳಿಸುತ್ತಿತ್ತು :

"ಇಂಗ್ಲೀಷಿನೋರು ಹೊರಟು ಹೋಗ್ತಾರಂತೆ ! ದೇಶಕ್ಕೆ ಸ್ವರಾಜ್ಯ ಬರುತ್ತಂತೆ ! ಗಾಂಧೀಮಹಾತ್ಮನಿಗೆ ಪಟ್ಟ !"

ಹೀಗೆ ಏನೇನೋ.

ಅವರ ಮಾತು ಕೇಳಿ ಮುದುಕನ ಹೃದಯ ಹಿಗ್ಗಿಹೋಯಿತು. ಕೊನೆಗೂ ಸ್ವಾತಂತ್ರ್ಯ ಬರುವುದೆ ? ತನ್ನ ಚಂದ್ರುವಿನ ಕನಸು ನೆನಸಾಗುವುದೆ ?...ಎಲ್ಲ ಸರಿ.ಆದರೆ ಒಂದೇ ಕೊರತೆ...ಚಂದ್ರೂ ಹಂಬಲಿಸಿದ ರಾಜ್ಯವನ್ನು ನೋಡಲು, ಆನಂದಿಸಲು ಅವನು ಮಾತ್ರ ಇಲ್ಲ. ಆದರೆ ಸ್ವರಾಜ್ಯ ಕೊನೆಗೂ ಬಂತಲ್ಲಾ ...ತಮ್ಮವರೆಲ್ಲರ ರಕ್ತತರ್ಪಣ, ಆತ್ಮಾರ್ಪಣ ಸಾರ್ಥಕವಾಯಿತಲ್ಲ. ಮುದುಕ

ಇನ್ನು ತಮ್ಮೆಲ್ಲರ ಕಷ್ಟ ಪೂರ್ಣವಾಗುವುದೆಂದು ಸಂತಸಗೊಂಡ. ಆ ಆನಂದದ ಅನುಭವದಲ್ಲಿ ಎಲ್ಲ ಸಂಕಟ ಮರೆತ. ಮಗನಿಗಿಂತ, ತಮ್ಮೆಲ್ಲರನ್ನೂ ಹೆತ್ತ ಹೊತ್ತ ದೇಶಮಾತೆಯ ಬಿಡುಗಡೆ ಹೆಚ್ಚಲ್ಲವೆ ?

ಪಾರ್ವತಿ ಸುದ್ದಿ ಕೇಳಿ ಗಂಡ ಸತ್ತ ದುಃಖ ಮರೆತು ಹಿರಿಹಿರಿ ಹಿಗ್ಗಿದಳು. "ಆಗಸ್ಟ್ ಹದಿನೈದು. ಅಂದಾದರೂ ಹೊಟ್ಟೆಯ ತುಂಬಾ ಏನಾದರೂ ಮಾಡಿ ತಿನ್ನಬೇಕು !" ಎಂದು ಯೋಚಿಸಿಕೊಂಡಳು.

* * *

ಆ ದಿನವೂ ಬಂತು. ಮುದುಕ, ಪಾರ್ವತಿ, ಏಳುವ ಹೊತ್ತಿಗೇನೇ ಶುರು ವಾಗಿತ್ತು ಪ್ರಭಾತ ಫೇರಿ. ಅವರಿಬ್ಬರ ಮನ ಸಂತಸದಿಂದ ಹಿಗ್ಗಿತು. ಇಷ್ಟು ದಿನದ ಕಷ್ಟಗಳು ಕೊನೆ ಮುಟ್ಟಿ, ಮುಂದಿನ ಶುಭೋದಯಕ್ಕೆ ನಾಂದಿಯಾಗಿ ಏಳುತ್ತಿದ್ದ ಸುಸ್ವಪ್ನಗಳು ಅವನ ಮನಸ್ಸನ್ನು ದಿಗಂತಕ್ಕೆಳೆದೊಯ್ದುವು. ಓಹ್ ಎಂತಹ ಸುದಿನ ಅದು !

ಮುದುಕ ಕೋಲೂರಿಕೊಂಡು ಮುಂಬಾಗಿಲಿಗೆ ಬರುವ ಹೊತ್ತಿಗೆ, ವಾದ್ಯ ನಿನಾದ ಬೇರೊಂದು ತೂರಿ ಬಂದು ಅವನ ಕಿವಿಗೆ ತಟ್ಟಿತು. ಅವನು ನೋಡ ನೋಡುತ್ತಿದ್ದಂತೆ ಮೆರವಣಿಗೆ ಮುಂದೆ ಬಂತು. ಹಿಂದೆ ಮುಂದೆ ಎಲ್ಲೆಲ್ಲೂ ಗಾಂಧೀ ಟೊಪ್ಪಿಗೆಗಳ ಸಮುದ್ರವು ಹರಿಯುವಂತಿತ್ತು. ಮಧ್ಯದಲ್ಲಿ ಶೃಂಗಾರ ವಾದ ರಥದಲ್ಲಿ ಭಾರತಮಾತೆಯ ಚಿತ್ರ. ಆಕೆಯ ಎರಡು ಬದಿಗಳಲ್ಲಿ, ಜನತೆಗೆ ನಮಸ್ಕರಿಸುತ್ತಾ ಮುಗುಳ್ನಗೆ ನಗುತ್ತಾ ನಿಂತಿರುವ ಬಾಪೂ–ನೆಹರೂರ ಫೋಟೋ...ಮುದುಕನ ಕಣ್ಣು ತುಂಬಿ ಬಂತು.

ಅಷ್ಟರಲ್ಲಿ ಬಾಗಿಲಿಗೆ ಬಂದು ನಿಂತಿದ್ದ ಪಾರ್ವತಿ ಚಿಟ್ಟನೆ ಚೀರಿದಳು. "ಪಾಪಿ ಪಾಪಿ" ಎಂದವಳ ನಾಲಿಗೆ ತೊದಲುತ್ತಿತ್ತು. ಮುದುಕ ಅವಳ ದೃಷ್ಟಿ ಯನ್ನನುಸರಿಸಿ ನೋಡಿದ.

ಅವನೇ ಆ ಪೋಲೀಸ್ ಇನ್ಸ್‌ಪೆಕ್ಟರ್ ! ಚಂದ್ರನನ್ನು ಅಂದು ಗುಂಡಿಕ್ಕಿ ಕೊಂದಾತ–ಮೆರವಣಿಗೆಯ ಮುಂದೆ ರಕ್ಷಣಾಧಿಪತಿ ! ಮುದುಕನ ರಕ್ತ ಒಮ್ಮೆಲೆ ಕುದಿಯಿತು. ಅಂತಹ ಪವಿತ್ರ ಹುತಾತ್ಮರ ಕಾಲಕಸದ ಯೋಗ್ಯತೆಯೂ ಇಲ್ಲ ದವನಿಗೆ ಈ ಗೌರವ ! ಅಂದು ಹಲವಾರು ನಿರಪರಾಧಿ ಜನರನ್ನು ನಿರ್ದಾಕ್ಷಿಣ್ಯ ವಾಗಿ ಕೊಂದಾತ, ಸಾಮ್ರಾಜ್ಯಶಾಹಿಯ ಗುಲಾಮ, ಇಂದು ಭಾರತ

ಮಾತೆಯ ಅವಿಚ್ಛಿನ್ನ ಭಕ್ತ! ರಥದ ಬೆಂಗಾವಲಾಗಿ ಹೊರಟ ದೇಶಪ್ರೇಮಿಯಂತೆ ಸೋಗು ಹಾಕಿರುವ ಧೂರ್ತ!

"ಧೂರ್ತ...ಧೂರ್ತ" ಎನ್ನುತ್ತಿದ್ದಂತೆ ಮುದುಕನ ಹಲ್ಲು ಕಟಕಟನೆ ಕಡಿದವು. ಅವನಿಗರಿವಿಲ್ಲದಂತೆಯೇ ಬೀದಿಗಿಳಿದು, ಇನ್ಸ್‌ಪೆಕ್ಟರನ್ನು ಹಿಡಿದು "ಧೂರ್ತ, ಪಿಶಾಚಿ" ಎಂದು ಚೀರತೊಡಗಿದ. ಆ ಅಧಿಕಾರಿ ನಕ್ಕ ಮಾತ್ರ! ಪೋಲೀಸರು ಮುದುಕನನ್ನು ಹಿಡಿದು ಜಗ್ಗಿದರು: "ಹುಚ್ಚಾ" ಎಂದು ಗೇಲಿ ಮಾಡಿದರು.

"ಯಾರು ಹುಚ್ಚ?...ಇಷ್ಟು ತ್ಯಾಗ ಮಾಡಿದವರಿಗೆ ಇರದ ಸ್ಥಳ ಈ ಪಿಶಾಚಿಗೆ?" ಎಂದು ಮುದುಕ ಆಕ್ರೋಶಿಸಿದ. ಆದರೆ ಅವನ ಕಿವಿಗೆ ಬಿದ್ದದ್ದು ಆ ಅಧಿಕಾರಿಯ ಭೀಕರ ನಗೆ ಮಾತ್ರ. ಮುಂದೆ ಕಣ್ಣು ಕತ್ತಲೆ ಬಂತು. ಕುಸಿದು ಕೆಳಗೆ ಬಿದ್ದ. ಆಮೇಲೇನಾಯಿತೋ ಅವನಿಗೆ ಒಂದೂ ತಿಳಿಯದು.

ಎಚ್ಚರವಾದಾಗ ಪಾರ್ವತಿ ಅಳುತ್ತಾ ಕುಳಿತಿದ್ದಳು. ತಾನು ಹಾಸಿಗೆಯ ಮೇಲೆ ಮಲಗಿದ್ದನು. ಮಾತನಾಡಲು ಯತ್ನಿಸಿದಾಗ ಸ್ವರವೇ ಹೊರಡಲಿಲ್ಲ. ಉದ್ವೇಗ ತಡೆಯಲಾರದೆ ಎದ್ದು ಕುಳಿತುಕೊಳ್ಳಲು ಹೋದಾಗ, ಪಾರ್ವತಿ ಬಲವಂತವಾಗಿ ಹಿಡಿದು ಹಿಂದೆ ಮಲಗಿಸಿದಳು...ಅದುವರೆಗೆ ಅವಳು ತಡೆದು ಹಿಡಿದಿದ್ದ ಕಣ್ಣೀರು ಕೋಟೆಯೊಡೆದು ನುಗ್ಗಿ ಬಂತು. ಅವಳ ಕಣ್ಣೊಳಗಿನಿಂದ ಮುತ್ತಿನಂತಹ ನಾಲ್ಕು ಹನಿ, ಮುದುಕನ ಮೈಮೇಲೆ ಬಿದ್ದಾಗ, ಅವನ ಹೃದಯ ಕಲಕಿಹೋಯಿತು. ಅವಳ ಕೈ ಭದ್ರವಾಗಿ ಹಿಡಿದುಕೊಂಡು ಮೆಲ್ಲನೆ ಕಂಪಿತ ಸ್ವರದಲ್ಲಿ ಹೇಳಿದ:

"ನೋಡು ತಾಯೀ! ಎಂತಹ ತ್ಯಾಗಕ್ಕೆ ಎಂತಹ ಪ್ರತಿಫಲ...!"

ಅವರಿಬ್ಬರ ಕಣ್ಣೀರೆ ಅವರ ತ್ಯಾಗಕ್ಕೆ ಸಾಕ್ಷಿಯಾಯಿತು.

ಮೇ, ೧೯೫೦

# ಸಾವಿನ ಮುಖ

ಪೋಸ್ಟ್‌ಮಾರ್ಟಮ್‌ಗೆ ಹೆಣ ಬಂದಿದೆಯಂತೆ, ಹೆಣ...ಎಂದು ಮೆಡಿಕಲ್ ಕಾಲೇಜಿನಲ್ಲೆಲ್ಲಾ ಸುದ್ದಿ ಹರಡಿತು...ಕೇಳಿದವರೆಲ್ಲಾ ಕುತೂಹಲಪ್ರೇರಿತ ರಾಗಿ ಹೆಣದ ರೂಮಿಗೆ ಧಾವಿಸಿ ಬಂದರು. ಅವರ ಕಾತರ ಕುತೂಹಲಗಳ ಉಯ್ಯಾಲೆಯಾಟ ನಡೆದಿದ್ದಾಗಲೇ ಜವಾನ ಅಲ್ಲಿಗೆ ಬಂದು, ಹೆಣದ ಮೇಲಿನ ಕರಿಯ ಮುಸುಕನ್ನು ಸರಿಸಿದ.

ಅಬ್ಬಾ! ಎಂದರು ಕೆಲವರು; ಪಾಪ! ಎಂದು ಸುಯ್‌ಗರೆದರು ಹಲವರು—

...ಹೆಣದ ಮುಖ ವಿಕಾರವಾಗಿ ಹೋಗಿತ್ತು. ಕಿರಿದ ಹಲ್ಲು, ಭಯಂಕರ ವಾಗಿ ನಿಟ್ಟಿಸುತ್ತಿದ್ದ ಕಣ್ಣುಗುಡ್ಡೆಗಳು, ಜೊಲ್ಲು ಸೋರಿದ ಬಾಯಿ, ನೀಲಿ ಕಟ್ಟಿದ ದೇಹ, ಗಂಟುಗಂಟಾದ ಕೈಕಾಲು—ಭೀಕರ ನೋಟ ಅದು!

"ಏನಾಗಿತ್ತಂತೆ ಇವನ್ಗೆ ?" ಎಂದು ನಿಖಿಲ ಜವಾನನನ್ನು ಕೇಳಿದ.

"ಮರ್‌ಕ್ಯುರಿಕ್ ಕ್ಲೋರೈಡ್ ಕುಡಿದು ಸತ್ಹೋಗಿದಾನೆ ಸಾರ್—ಹೆಂಡತಿ ಮಕ್ಳು ಎಲ್ಲಾ ಇದ್ರಂತೆ!" ಎಂದು ಹೆಣವನ್ನು ಅಲ್ಲಿಗೆ ತಂದಿದ್ದ ಜವಾನ ಉತ್ತರವಿತ್ತ.

ಮತ್ತೂ ಮಾತು ಮುಂದುವರಿಸುತ್ತ, "ನನಗೆ ಪರಿಚಯ ಸಾರ್. ಅವನಿಗೆ ತುಂಬಾ ಕಷ್ಟವಾಗಿತ್ತು ಸಾರ್. ತುಂಬಾ ಸಾಲ—ಹೊಟ್ಟೆಗೆ ಅನ್ನ ಇಲ್ಲ— ಹಾಗೆ ಬದುಕೋಕಿಂತ ಸಾಯೋದೇ ಮೇಲು ಅನಿಸಿರಬೇಕು ಅವನ್ಗೆ. ಹೊರಟ್ಹೋದ. ಎಂತಾ ಮನುಷ್ಯ ಹೇಗ್ಹಾಗೋಗಿದಾನೆ—ಅಯ್ಯೋ ಗ್ರಹಚಾರವೇ!" ಎಂದು ಆತ ಮುಖ ತಿರುಗಿಸಿಕೊಂಡ.

ಒಬ್ಬೊಬ್ಬರಾಗಿ ಎಲ್ಲರೂ ಹೊರಟರು. ನಿಖಿಲ ಮಾತ್ರ ಹೆಣವನ್ನೇ ದಿಟ್ಟಿಸಿ ನೋಡುತ್ತಾ ನಿಂತಿದ್ದ...ಸತ್ತ ಮನುಷ್ಯನ ವಿಷಯವಾಗಿ ಅವನಿಗೆ ಕನಿಕರ, ದುಃಖ ಹುಟ್ಟಿದುವು.

ಅವನನ್ನೇ ನಂಬಿದ ಹೆಂಡತಿ ಮಕ್ಕಳ ಗತಿ ?—ಬದುಕುವ ಹಕ್ಕಿಲ್ಲದೆ ಆತ ಸತ್ತುದು—ಸಾಯುವಾಗ ಅವನು ಅನುಭವಿಸಿದ ಅಪಾರ ಯಾತನೆ—ಈ ವಿಷಯಗಳೆಲ್ಲಾ ಅವನ ತಲೆಯಲ್ಲಿ ಪ್ರಶ್ನೆಯ ತರಂಗಗಳನ್ನೆಬ್ಬಿಸಿ ಹಾದು ಹೋದುವು.

"ಅವನೇಕೆ ಸಾಯಬೇಕು? ಬಡವನಾದ ಮಾತ್ರಕ್ಕೆ ಅವನಿಗೆ ಬದುಕುವ ಹಕ್ಕಿಲ್ಲವೆ? ಹೀಗೂ ಆಗುವಂತೆ ಮಾಡುವ ಸಮಾಜ ವ್ಯವಸ್ಥೆ ಎಷ್ಟು ಘೋರ!"

ಹುಂ! ಅಂತಹದೇ ಸಾವಿರ ವಿಚಾರಗಳು—

ಡಾಕ್ಟರು ಬಂದಾಗ, "ವಿಷ ಕುಡಿದು ಸತ್ತವರನ್ನು ಬದುಕಿಸಲು ಆಗೋದಿಲ್ಲವೆ ಸಾರ್?" ಎಂದು ನಿಖಿಲ ಕೇಳಿದ.

ಡಾಕ್ಟರು ನಕ್ಕರು. ನಿಖಿಲನನ್ನೂ, ಅಲ್ಲೇ ಅನಾಥವಾಗಿ ಬಿದ್ದಿದ್ದ ಹೆಣವನ್ನೂ ಒಂದು ಬಾರಿ ದಿಟ್ಟಿಸಿ ನೋಡಿ, "ನಮ್ಮ ಕಾಲಕ್ಕೆ ಆಗಲಿಲ್ಲ ಬದುಕಿಸೋದು. ನಿಮ್ಮ ಕಾಲದಲ್ಲಿ ಇನ್ನು ಕಂಡುಹಿಡೀಬೇಕು!" ಎಂದು ಯಾವುದೋ ವಿಶ್ವಾಸದಿಂದ ಹೇಳಿದರು.

ಆ ಮರ್ಕ್ಯುರಿಕ್ ಕ್ಲೋರೈಡ್—ಆ ಸ್ವಲ್ಪ ಪುಡಿಯಲ್ಲಿ ಎಂತಹ ಭೀಕರ ಶಕ್ತಿ ಅಡಗಿದೆ!—ಅಂತಹ ಚೇತನಪೂರ್ಣ ದೇಹವನ್ನು ನಿಶ್ಚೇಷ್ಟಿತಗೊಳಿಸಿ ಒಂದೆರಡೇ ಗಂಟೆಗಳಲ್ಲಿ—ಹಿಂಡಿ ಹಿಪ್ಪೆಮಾಡುವ ರುದ್ರ ಶಕ್ತಿ!....ಆ ಒಂದು ಜೀವ ಹಿಂದೆ ಬದುಕಿ ಬಾಳಿತ್ತು ಎಂದು ನಂಬಲೂ ಸಾಧ್ಯವಾಗದ ಹಾಗೆ—ಕುರೂಪಗೊಳಿಸಿ, ವರ್ಷವರ್ಷವೂ ನೂರಾರು ಜೀವಿಗಳ ಹೃದಯ ಜೀವ ಬರಿದು ಮಾಡಿದ ಆ ಪುಡಿ!

ಮನೆಯಲ್ಲಿ ತಂಗಿ ಕಾಮಿನಿಗೂ ಅದೇ ಮಾತು ಹೇಳಿದ ನಿಖಿಲ. ತುಂಬಾ ಕಷ್ಟ ಅನುಭವಿಸಿ ಬೆಳೆದಾಕೆ ಕಾಮಿನಿ. ಸತ್ತವನ ಚರಿತ್ರೆ ಕೇಳಿದಾಗ "ಹೌದು, ಜೀವನ ಬೇಸರವಾದಾಗ ನಮಗೂ ಹಾಗೇ ಅನಿಸುತ್ತೆ!" ಎಂದಳು.

ನಿಖಿಲ ಕ್ರಾಪನ್ನು ಹಿಂದಕ್ಕೆ ತೀಡುತ್ತಾ "ಹಾಗಲ್ಲಮ್ಮ, ನಾವು ಅಷ್ಟಕ್ಕೇ ಧೈರ್ಯಗೆಡಬಾರದು. ನೋಡು, ನಮಗಿರೋದು ಒಂದೇ ಜನ್ಮ. ಅದನ್ನು ಸಾರ್ಥಕಪಡಿಸಿಕೋಬೇಡವೆ?—ಮುಂದೆ ಒಳ್ಳೆಯ ಕಾಲ ನಿರ್ಮಿಸೋದಕ್ಕೆ, ನಾವಿರಬೇಡವೆ?"

ಮಂದವಾದ ದೀಪದ ಬೆಳಕಿನಲ್ಲಿ ಅವನ ಮುಖ ಅಪೂರ್ವ ಕಾಂತಿಯಿಂದ ಮಿಂಚುತ್ತಿತ್ತು...ಕಾಮಿನಿ, ತೆರೆದ ಕಣ್ಣುಗಳಿಂದ ಅಣ್ಣನನ್ನೇ ದಿಟ್ಟಿಸಿ ನೋಡುತ್ತಾ ನಿಂತಳು.

ಅವರಿಬ್ಬರು ಊಟ ಮಾಡುವಾಗಲೂ ಅದೇ ಮಾತು ನಡೆದಿತ್ತು. ನಿಖಿಲ

"ಮರಣವೇ ಇಲ್ಲದಂತೆ ಮಾಡುವ ಕೆಲಸವಾಗಬೇಕು; ಶೋಧೆಯಾಗಬೇಕು" ಎನ್ನುತ್ತಲೇ ಇದ್ದ.

* * *

ರಾತ್ರಿ ಓದಲು ಕುಳಿತಾಗ ಮತ್ತೆ ಮತ್ತೆ ನಿಖಿಲನಿಗೆ ಆ ವಿಷಯದ ನೆನಪು ಬರಹತ್ತಿತು. ಆ ಸತ್ತ ಮನುಷ್ಯನ ವಿಚಾರ ತಿರುತಿರುಗಿ ಅವನ ತಲೆ ಹೊಕ್ಕು ಮನ ಕಲಕುತ್ತಿತ್ತು...!

ತುಂಬಾ ಆಯಾಸವಾಗುತ್ತಿದೆ ಎನಿಸಿತು.

ಮೇಲೆದ್ದು ಟೇಬಲ್ ಮೇಲಿಟ್ಟಿದ್ದ ಗಾಜಿನ ಲೋಟದಿಂದ ನೀರು ಕುಡಿದ.

ನೀರು ಕುಡಿದ ಮೇಲೆ ಮತ್ತೂ ಹೆಚ್ಚು ಆಯಾಸವಾಗುತ್ತಿದೆಯೆನಿಸಿತು, ಯಾಕೋ! ಆ ಮರೆ ದೀಪದ ಬೆಳಕಿನಲ್ಲಿ ನಿಖಿಲ ತಲೆಯ ಮೇಲೆ ಕೈ ಹೊತ್ತು ಕುಳಿತ...ಅವನ ಕೆದರಿದ ತಲೆಯ ನೆರಳು ಅವನ ಕೆಳಗೆ ಬಿದ್ದು ಭಯಂಕರ ವಾಗಿ ಕಾಣುತ್ತಿತ್ತು....ಯಾಕೋ ಎಂದೂ ಇಲ್ಲದಷ್ಟು ವಿಕಾರವಾಗಿ ಕಾಣಿಸಿ ಅದು ಅವನ ಧೃತಿ ಕೆಡಿಸುತ್ತಿತ್ತು.

ಆಯಾಸದ ಬಿಸಿ ಕಡಿಮೆಯಾಗಲಿಲ್ಲ. ಗಳಿಗೆ ಗಳಿಗೆಗೂ ಬಳಲಿಕೆ ಹೆಚ್ಚಾ ಯಿತು. ಕಾರಣ ಹೊಳೆಯಲಿಲ್ಲ—ಅದರ ಮೂಲ ಹುಡುಕಲು ಮೆದುಳು ಕೆಲಸ ಮಾಡುತ್ತಿರಲಿಲ್ಲ. ಸಾಕಾಯಿತು ನೋವಿನ ಯಾತನೆ!

ಕುರ್ಚಿಯಿಂದೆದ್ದು ಹಾಸಿಗೆ ಬಿಡಿಸಿ ಬಿದ್ದುಕೊಂಡ—

ಆ! ಇದ್ದಕ್ಕಿದ್ದಹಾಗೇ ಒಂದು ಯೋಚನೆ ಹೊಳೆದು ಹೋಯಿತು.

ತಂಗಿಗೆ ತೋರಿಸಲಿಕ್ಕೆಂದು ಮರ್‌ಕ್ಯುರಿಕ್ ಕ್ಲೋರೈಡ್ ತಂದು ಟೇಬಲ್ ಮೇಲಿಟ್ಟಿದ್ದ. ಅದನ್ನೇ ಅವಸರದಲ್ಲಿ ನೀರೆಂದು ಕುಡಿದುಬಿಟ್ಟಿದ್ದರೆ—

ಅಯ್ಯೋ ಹೇಗಾಯಿತಲ್ಲಾ...

ಮೈಯಲ್ಲೆಲ್ಲಾ ಭುಗ್ಗನೆ ಉರಿ ಹೊತ್ತಿಕೊಂಡಿತು. ಅದರ ಬೇಗೆ ತಾಳ ಲಾರದೆ ನಿಖಿಲ ಹಾಸಿಗೆಯಲ್ಲೆಲ್ಲಾ ಹೊರಳಾಡಿದ. ಕಾಮಿನಿಯನ್ನು ಕೂಗ ಬೇಕೆನಿಸಿತು. ಕೂಗಲು ಬಾಯಿಂದ ಸ್ವರ ಮಾತ್ರ ಹೊರಡಲಿಲ್ಲ. ಆ ನೀರವ ವಾತಾವರಣದಲ್ಲಿ ಕಾಮಿನಿಯ ಕಿರು ಗೊರಕೆಯ ಧ್ವನಿ ಮಧುರವಾಗಿ ತೇಲಿ ಬರುತ್ತಿತ್ತು. ಅವಳ ನಿದ್ದೆ ಕೆಡಿಸಲು ಇಚ್ಛಿಸಲಿಲ್ಲ ನಿಖಿಲ. ನರನರವನ್ನೂ ಸೀದಿದ ಹಾಗಾಯಿತು. ರಕ್ತನಾಳಗಳೆಲ್ಲಾ ಒಡೆಯುವಷ್ಟು ನೋವು! ಆಃ...

ಆಃ ಎಂಥ ವೇದನೆ ಇದು! ಇಷ್ಟೆಲ್ಲಾ ಆಗಬೇಕಾದರೆ ತಾನು ವಿಷವನ್ನು ಕುಡಿದಿರಲೇಬೇಕು. ಇಲ್ಲದಿದ್ದರೆ ಇಷ್ಟೆಲ್ಲಾ ಆಯಾಸಕ್ಕೆ ಕಾರಣ?

ಸರಿ, ಸರಿ, ಅದೇ ಸರಿ! ಟೇಬಲ್ ಮೇಲಿಟ್ಟಿದ್ದ ವಿಷವನ್ನು ಅವಸರದಲ್ಲಿ ನೀರೆಂದು ಕುಡಿದುಬಿಟ್ಟಿದ್ದೇನೆ; ಈಗ ಅನುಭವಿಸುತ್ತಿದ್ದೇನೆ; ಇನ್ನೆರಡು ಗಂಟೆಯೂ ಬದುಕುತ್ತೇನೋ ಇಲ್ಲವೋ!...ಎದ್ದು ಆಸ್ಪತ್ರೆಗಾದರೂ ಹೋಗಲಿಕ್ಕಾದರೆ–ಆ...ಏಳಲೂ ಆಗುತ್ತಿಲ್ಲವಲ್ಲ. ಯಾಕೆ! ಸುಡುತ್ತಿರುವ ಹಾಗಾಗುತ್ತಿದೆ. ಬರಬರುತ್ತಾ ಈ ನೋವಿನಲ್ಲಿ ಎಷ್ಟೊತ್ತು ಉಳಿದೇನು ತಾನು?

ಹಲ್ಲು ಕಿರಿದು ಸತ್ತ ಮನುಷ್ಯ ಮೇಲೆದ್ದು ನಕ್ಕಹಾಗಾಯಿತು—

''ನೀನೂ ಅನುಭವಿಸು—ಅನುಭವಿಸು'' ಎಂದು ಅಣಕಿಸಿ ಬಿರುಗಣ್ಣು ಬಿಟ್ಟು ನೋಡಿದ ಹಾಗಾಯಿತು.

ಆ ಮನುಷ್ಯನಿಗೆ ತನ್ನ ಮೇಲೆ ಅಷ್ಟು ಸೇಡು ಬರಬೇಕಾದರೆ ಆ ನೋವು ಅವನನ್ನೆಷ್ಟು ಕಾಡಿಸಿರಬಹುದು; ಎರಡು ಗಂಟೆಯ ಕಾಲ ಆತ ಹೆಂಡತಿ ಮಕ್ಕಳಿಗೆ ಗೊತ್ತಿಲ್ಲದ ಹಾಗೆ, ತನ್ನಂತೆ ಎಷ್ಟು ನೋವು ಅನುಭವಿಸಿರಬೇಕು.

ಆತ ಸಾಯುವ ಮುನ್ನ ತನ್ನ ಹೆಂಡತಿ ಮಕ್ಕಳ ಬಗ್ಗೆ ಯೋಚಿಸಿರ ಬಹುದೇ?

ತಾನು ಸತ್ತಮೇಲೆ ಅವರ ಪಾಡು ಏನಾಗಬಹುದೆಂಬುದರ ಬಗ್ಗೆ ಆತ ವಿಚಾರ ಮಾಡಿರಲಿಕ್ಕಿಲ್ಲವೆ? ತಾನು ಮಾತ್ರ ಸುಖವಾಗಿ ಸತ್ತರೆ ಸಾಕು ಎಂದಿರಬಹುದು. ಸಾವಿನಲ್ಲಿ ಸುಖ ಏನು ಬಂತು? ಆದರೆ ವಿಷಕ್ಕಿಂತ ಭೀಕರ ವಾದ ಜೀವನವನ್ನು ಎದುರಿಸುವುದಕ್ಕಿಂತ, ಒಂದೆರಡು ಗಂಟೆಗಳ ಕಾಲ ಎಲ್ಲ ದುಃಖವನ್ನೂ ನುಂಗಬೇಕು ಎಂದು ಭಾವಿಸಿರಬಹುದು ಅವನು ಆದರೆ ತಾನು?

ಏನು ಕಡಿಮೆಯಾಗಿತ್ತೆಂದು ವಿಷ ಕುಡಿಯಬೇಕು? ಇನ್ನೊಂದೆರಡು ವರ್ಷ ದಲ್ಲಿ ಒಳ್ಳೆಯ ಡಾಕ್ಟರಾಗಿರುತ್ತಿದ್ದೆ. ಪ್ರೇಮದ ತಂಗಿ ಎಲ್ಲವನ್ನೂ ತನಗಾಗಿ ಧಾರೆಯೆರೆದು ನಿಂತಿದ್ದಾಳಲ್ಲಾ, ಅವಳನ್ನಗಲಿ ತಾನು ಹೊರಟು ಹೋದರೆ ಅವಳ ಗತಿ?—ಅವಳಿಗೆ ಸ್ವಾತಂತ್ರ್ಯ, ಬದುಕಿ ಬಾಳುವ ಛಲ, ಕೆಚ್ಚಿದೆಯೆ? —ಆ ಕೆಚ್ಚು ಮೊದಲಿನಿಂದ ನಮ್ಮ ಹೆಣ್ಣುಮಕ್ಕಳಿಗೆ ನಾವು ಬೆಳೆಸಿಕೊಟ್ಟಿಲ್ಲ ವಲ್ಲಾ! ಆಗ—ಅವಳ ಭಾವೀ ಜೀವನ ಚಿಂದಿಚಿಂದಿಯಾಗೋದಿಲ್ಲವೆ?— ಅದಕ್ಕೆಲ್ಲಾ ಯಾರು ಹೊಣೆ?

ತನಗಿರುವವಳು ಅವಳೊಬ್ಬಳೇ! ಚಿನ್ನದಂತಹ ತಂಗಿ! ಆದರೂ ಇದ್ದುದರಲ್ಲಿ ಅವಳಷ್ಟು ಬುದ್ಧಿವಂತೆ—ಧೈರ್ಯವಂತೆಯನ್ನು ತಾನು ಬೇರೆ ಕಂಡಿದ್ದಿಲ್ಲ. ಮುಂದೆ ಅವಳಿಗೆ ಎಂಥ ಒಳ್ಳೆಯ ಭವಿಷ್ಯ ಕಾದಿತ್ತೋ ಏನೋ! ಎಲ್ಲಾ ಹಾಳಾಗಿ ಹೋಗುತ್ತಿದೆ. ಅವಳೂ ಸಾವಿರಾರು ಜನ ನಿಸ್ಸಹಾಯಕ ಅನಾಥೆಯರಲ್ಲಿ ಒಬ್ಬಳಾಗಿ—ಅಯ್ಯೋ! ಎಂಥ ಗತಿ ಕಾಮಿನಿಗೆ! ತನ್ನ ಕಾಮಿಗೆ ಎಂಥ ದುರವಸ್ಥೆ!

ಆದರೂ ತಾನೇನು ಮಾಡೋಹಾಗಿದೇನೆ'' ಸಾಯುತ್ತಾ ಬಿದ್ದಿದ್ದೇನಲ್ಲ!... ಅಕಸ್ಮಾತ್ ಈ ವಿಷ ತನ್ನನ್ನೇನೂ ಮಾಡದಿದ್ದರೆ—ಅಯ್ಯೋ, ಅಷ್ಟಾಗಿಬಿಟ್ಟರೆ...

ಹೃದಯ ಹೇಗೆ ಬಡಕೊಳ್ಳುತ್ತಿತ್ತಲ್ಲಾ ಇಷ್ಟು ಹೊತ್ತು—ಸುಮಾರು ನೂರರ ಮೇಲೇನೇ ಇರಬೇಕು ; ಈಗ ಯಾಕೆ ಇಷ್ಟು ನಿಧಾನದಾಗಿ ಹೊಡೆದುಕೊಳ್ಳಹತ್ತಿದೆ—ಮೆಲ್ಲಗಾಗಿ ಕೇಳಿಸ್ತಾ ಇದೆ ಕಿವಿಗೆ, ಒಳ್ಳೇ ಮಧುರವಾದ ಸಂಗೀತದಂತೆ.

ನಾಡೀನೇ ಆಡ್ತಾ ಇಲ್ಲ ಅನಿಸುತ್ತೆ. ಹೃದಯದ ಹೊಡೆತ ಎಷ್ಟೊಂದು ಕಡಿಮೆಯಾಗಿ ಹೋಯಿತಲ್ಲಾ—ಅಯ್ಯೊ ಇನ್ನೊಂದೆರಡೇ ಗಳಿಗೆ! ಆಗಿ ಹೋಯ್ತು ಜೀವನ! ಎಷ್ಟೊಂದೆಲ್ಲಾ ಆಸೆ ಕಟ್ಟಿಕೊಂಡಿದ್ದೆ ಜೀವನದಲ್ಲಿ. ಬಡವರ ಪಾಲಿನ ಭಾಗ್ಯದೇವತೆಯಾಗಬೇಕು: ಸಮಾಜ ವ್ಯವಸ್ಥೆ ಬದಲಾಯಿಸಬೇಕು; ರೋಗರುಜಿನ ಸಾವುಗಳೇ ಇಲ್ಲದಂತೆ ಮಾಡಬೇಕು!—ಏನಾಗಿ ಹೋಯಿತು ?

ಎಷ್ಟೊಂದು ಸಾರೆ ಜೀವನದ ಸುಂದರ ಸ್ವಪ್ನಗಳ ಬಗ್ಗೆ ಕಾಮಿನಿ ಮತ್ತು ತಾನು ಮಾತಾಡಿರಲಿಲ್ಲ! ''ಅಣ್ಣ, ನಾನು ಮದುವೆಯೇ ಆಗೋದಿಲ್ಲ. ನಿನ್ನ ಬಿಟ್ಟು ಹೋಗೋದಿಲ್ಲ. ಜತೇಲಿ ಇರ್ತೀನಿ ಯಾವಾಗಲೂ'' ಎಂದು ಕಾಮಿನಿ ಹೇಳುತ್ತಿದ್ದಳು. ತಾನು ಆಗ ನಗುತ್ತಿದ್ದೆ. "ಹುಚ್ಚಿ ಕಣೇ ನೀನು! ಮದುವೆಯೇ ಬೇಡವೆಂದರೇನು? ಯಾವುದಾದರೊಂದು ದಿನ ನನಗೊಬ್ಬಳು ಸಂಗಾತಿ ದೊರೆಯೋದು ಎಷ್ಟು ನಿಜವೋ, ನಿನಗೊಬ್ಬ ಜತೆಗಾರ ದೊರೆಯೋದೂ ಅಷ್ಟೆ ನಿಜ" ಎನ್ನುತ್ತಿದ್ದೆ. "ಅತ್ತಿಗೆ ಬರಬೇಕು, ನಿಜ. ಬಂದಾಗ ಮೂವರೂ ಜತೇಲಿ ಇರೋಣ" ಎನ್ನುತ್ತಿದ್ದಳು ಕಾಮಿನಿ. "ಸರಿ, ಸರಿ, ನಿನ್ನವನೂ ಬಂದಾಗ

ನಾಲ್ಕು ಜನಾನೂ ಒಟ್ಟಿಗೇ ಇದ್ದರಾಯಿತು" ಎಂದು ಉತ್ತರವೀಯುತ್ತಿದ್ದೆ. "ಹೋಗಣ್ಣ !" ಎಂದು ಕಾಮಿನಿ ಹುಸಿಮುನಿಸು ತೋರುತ್ತಿದ್ದಳು.

ಅಷ್ಟೇ ಅಲ್ಲ ; ನಿಜಕ್ಕೂ ಸ್ವತಂತ್ರಳಾದ ಹೆಣ್ಣು ಹೇಗಿರಬೇಕು ಎಂಬುದರ ಬಗ್ಗೆ ತನ್ನ ಕಲ್ಪನೆಯ ಚಿತ್ರವನ್ನು ಕಾಮಿನಿ ಚಿತ್ರಿಸುತ್ತಿದ್ದಳು—"ಯಾವ ಗಂಡಸಿಗೂ ನಾನು ಗುಲಾಮಳಾಗೋದಿಲ್ಲ. ಯಾವ ಗಂಡಸು ನನಗೆ ಗುಲಾಮನಾಗೋದು ಬೇಡ. ಸಂಸಾರದ ಹಕ್ಕುಬಾಧ್ಯತೆಗಳಿಗೆ ಸಮನಾದ ಪಾಲುಗಾರರಾದ ದಂಪತಿಗಳಾಗಿರಬೇಕು" ಎಂದೆಲ್ಲ ಪ್ರತಿಪಾದಿಸುತ್ತಿದ್ದಳು. ಹಾಗೇ ಆಗಲಮ್ಮ" ಎನ್ನುತ್ತಿದ್ದೆ ನಾನು.

ಆದರೆ ಈಗ—ಈಗ—ಹೊರಟೇಹೋಗುತ್ತಿದ್ದೆನಲ್ಲ ?

ಕುತ್ತಿಗೆಯ ನರ ಬಿಗಿದು ಬರಹತ್ತಿದೆ. ಕಣ್ಣಿಗೆ ಯಾವುದೋ ಪರೆ ಬಂದು ಸರಿಯುತ್ತಿದೆ—ಹೃದಯದ ಹೊಡೆತವೂ ಕೇಳದ ಹಾಗೆ ಕಿವಿ ಕಿವುಡಾಗುತ್ತಿದೆಯಲ್ಲಾ...!

ಗಡಿಯಾರದ ಟಿಕ್ ಟಿಕ್ ಶಬ್ದವೊಂದೇ ಕಿವಿ ಕಿವುಡಾಗಿಸುವಂತೆ ಬಾರಿಸುತ್ತಿದೆ. ಸುತ್ತಲಿನ ಭೀಕರ ನಿಶ್ಶಬ್ದವನ್ನು ಭೇದಿಸಿಕೊಂಡು ವಿಕಾರ ಧ್ವನಿಯಲ್ಲಿ ನಾಯಿಗಳು ಬಗುಳುತ್ತಿವೆ. ಎಂತಹ ಅಪಸ್ವರ !

ಒಂದು...ಎರಡು...ಮೂರು ಮುಂದೆ ಹೋಗುತ್ತಲೇ ಇಲ್ಲ. ಹೃದಯದ ಬಡಿತ ಕೊನೆಯ ಉಸಿರಿನ ಹಿಂದೆ ತನ್ನೆಲ್ಲಾ ಆಸೆಯನ್ನೂ ದಗ್ಧಮಾಡಿಕೊಂಡು ಬರುತ್ತಿರುವ ಕಡೆಯದಾದ ನಿಟ್ಟುಸಿರು...ಕಟ್ಟಕಡೆಯದು. ಹೃದಯದ ಬಡಿತ ಪೂರಾ ನಿಂತುಹೋಯಿತು...ಅಯ್ಯೋ!...ನಿಖಿಲನ ದೇಹ ಪಕ್ಕಕ್ಕೆ ಹೊರಳಿಕೊಂಡಿತು—ಅಲ್ಲಿಗಾಯಿತು ಒಂದು ಅಧ್ಯಾಯ !

* * *

ಬೆಳಿಗ್ಗೆ ಹೊತ್ತೇರಿದಾಗ ಕಾಮಿನಿ ನಿಖಿಲನ ಕೊಠಡಿಯ ಬಾಗಿಲನ್ನು ಮುಂದೆ ನೂಕಿ ಒಳಗೆ ಹೋದಳು. ನಿಖಿಲ ನಿರ್ಜೀವವಾಗಿದ್ದಂತೆ ಬಿದ್ದಿದ್ದ. ಮರದ ಕೊರಡಿನ ಹಾಗಿತ್ತು ದೇಹ. ಕೆದರಿದ ಕ್ರಾಪು ಮುಖವನ್ನು ಮುಚ್ಚಿತ್ತು. ಹೊದೆಯುವ ಬಟ್ಟೆ ಮೂಲೆಯಲ್ಲಿ ಮುದುಡಿ ಬಿದ್ದಿತ್ತು. ಅಸ್ತವ್ಯಸ್ತವಾಗಿತ್ತು ಹಾಸಿಗೆ. ಗಾಬರಿಯಾಗಿ ಆಕೆ ಹಿಡಿದಲುಗಿಸಿದಾಗ ಅವನಿಗೆಚ್ಚರವಾದಂತೆ ಕಾಣಲಿಲ್ಲ.

ಭಯಭೀತಳಾಗಿ ಆಕೆ ಸುತ್ತಲೂ ನೋಡಿದಳು...ಟೇಬಲಿನ ಮೇಲಿದ್ದ

ಬರಿದಾದ ಲೋಟ ಹಾಗೂ ಇನ್ನೊಂದು ಸೀಸೆಯಲ್ಲಿದ್ದ ಯಾವುದೋ ದ್ರಾವಕ ಅವಳನ್ನು ನೋಡಿ ನಗುತ್ತಿದ್ದುವು.

ತಂಗಿ ಒಂದೇ ಸಮನೆ ಅಣ್ಣನ ಮೈ ಕುಲುಕಿದಳು.

"ಅಯ್ಯೋ!" ಎಂದು ಚೀರಿಕೊಳ್ಳಬೇಕು ಎನ್ನಿಸಿತು ಕಾಮಿನಿಗೆ. ಸಹಾಯಕ್ಕೆಂದು ಹೊರಗಿನಿಂದ ಯಾರನ್ನಾದರೂ ಕರೆಯಬೇಕು ಎಂದುಕೊಂಡಳು. ಆಕೆಗೆ ಬವಳಿಬಂದಂತಾಯಿತು. ಕಿಟಕಿಯೊಳಗೆ ಬರತೊಡಗಿದ್ದ ಬಿಸಿಲು ಹುಚ್ಚೆದ್ದು ಕುಣಿಯುತ್ತಿತ್ತು. ಕೊಠಡಿಯೊಳಗಿದ್ದ ಸಾಮಗ್ರಿಗಳೆಲ್ಲ ಚಲಿಸುತ್ತಿದ್ದಂತೆ ಭಾಸವಾಯಿತು.

"ಅಯ್ಯೋ! ಇನ್ನೇನು ಹಾಗಾದರೆ ?"

ಆಕೆ ಅಣ್ಣನ ದೇಹದ ಮೇಲೊರಗಿಕೊಂಡು ಬಿಕ್ಕಿಬಿಕ್ಕಿ ಅತ್ತಳು.

...ನಾಲ್ಕಾರು ನಿಮಿಷಗಳಾದ ಮೇಲೆ ನಿಖಿಲ ಮೈ ಮುರಿದು ಮೇಲೆದ್ದ. ಪ್ರೇತಕಳೆ ತಾಂಡವವಾಡುತ್ತಿತ್ತು ಅವನ ಮುಖದ ಮೇಲೆ! ಮಂಕಾಗಿ ಆತ ಕಣ್ಣು ಹಿಸುಕಿಕೊಂಡು ನೋಡಿದ ಸುತ್ತಲೂ. ಕಾಮಿನಿ ಅಲ್ಲಿ ನಿಂತಿದ್ದಳು, ತಂಗಿ ಕಾಮಿನಿ.

ಅವನು ಎದ್ದು ಕುಳಿತದ್ದು ನೋಡಿ ಕಾಮಿನಿಗೆ ಹೋದ ಜೀವ ಮರಳಿ ಬಂತು. ಮೇಜಿನ ಮೇಲಿದ್ದ ಸೀಸೆಯನ್ನೆತ್ತಿ ಅವನೆದುರು ಹಿಡಿದಳು.

"ಇದನ್ನು ಇಲ್ಲೇ ಯಾಕಣ್ಣಾ ಇಟ್ಟಿದ್ದೆ?" ಎಂದಳು.

ನಿಖಿಲ ಆನಂದಾಶ್ಚರ್ಯಗಳಿಂದ ಕಣ್ಣರಳಿಸಿದ...ಅವನ ಬಾಯಿಂದ ಉದ್ಗಾರವೊಂದು ಹೊರಬಿತ್ತು.

"ಹಾಗಾದರೆ ನಾನು ಕುಡಿದದ್ದು ಮರ್‌ಕ್ಯುರಿಕ್ ಕ್ಲೋರೈಡ್ ಅಲ್ಲ. ನೀರೇ!"

ಅವನು ಹೇಳಿದ್ದು ಅರ್ಥವಾಗದೆ ಕಾಮಿನಿ, "ಏನು ? ಏನು ?" ಎಂದು ಕೇಳಿದಳು. ನಿಖಿಲ ದಿಂಬಿನಲ್ಲಿ ಮುಖ ಮರೆಮಾಡಿ ಖೋ ಖೋ ಎಂದು, ಕೊಠಡಿಯು ತುಂಬ ಸಂತಸದ ಕಾರಂಜಿ ಪುಟಿದ ಹಾಗೆ, ಹೃದಯ ಬಿರಿಯುವಂತೆ ನಕ್ಕ.

ಮಾರ್ಚ್, ೧೯೫೩

---